ಬಡೆಕ್ಕಿಲ

ವೆಂಕಟರಮಣ ಭಟ್



# ಗೀತಾಸಾರ





# ಗೀತಾಸಾರ

—ಕನ್ನಡ ಭಾಮಿನೀ ಷಟ್ಪದಿಯಲ್ಲಿ—

ಗ್ರಂಥ ಕರ್ತ:

**ಬಡೆಕ್ಕಿಲ ವೆಂಕಟ್ರಮಣ ಭಟ್,**

ಪುತ್ತೂರು. ದ. ಕ.

ಪ್ರಕಾಶಕರು:

**ಶ್ರೀ. ಶಿವರಾಮ ಕಾರಂತ, ಪುತ್ತೂರು. ದ. ಕ.**

1946

ಬೆಲೆ: ರೂ. 1-12-0.

# ಪ್ರಸ್ತಾವನೆ.

ಕರ್ಮವನ್ನು ಸಂಪೂರ್ಣವಾಗಿ ಬಿಟ್ಟುಬಿಡುವುದು ದೇಹಧಾರಿಗಳಿಂದಾಗದ ಕಾರ್ಯವಾದಕಾರಣ ರಾಗ-ದ್ವೇಷಗಳಿಗೆ ಒಳಗಾಗದೆ ಆತ್ಮಾರ್ಪಮ್ಯ ಬುದ್ಧಿಯಿಂದ ಆಮರಣಾಂತ ಮಾಡಬೇಕಾದ ಕರ್ಮವನ್ನು ಮಾಡಬೇಕೆಂಬುದೇ ಗೀತೋಪದೇಶದ ಸಾರವು. ಈ ಸಾರಸಂಗ್ರಹವೇ "ಗೀತಾಸಾರ" ವೆಂಬ ಈ ಗ್ರಂಥವು.

ಲೋಕದಲ್ಲಿ ತಪ್ಪು-ಒಪ್ಪು, ನ್ಯಾಯ-ಅನ್ಯಾಯ, ಧರ್ಮ-ಅಧರ್ಮಗಳೇ ಮೊದಲಾದ ದ್ವಂದ್ವಗಳ ಸಿದ್ಧಾಂತಕ್ಕೆ ಹೊರಟರೆ ಕಡೆಗೆ ನಮ್ಮ ಪೂರ್ವಿಕರಾದ ಶಾಸ್ತ್ರಕಾರರ ವಚನಕ್ಕೇ ಶರಣು ಹೋಗದೆ ಗತ್ಯಂತರವಿರದ್ದರಿಂದ ವಿಷಯ ದೃಷ್ಟಿಯಿಂದಲೂ, ಕಾವ್ಯದೃಷ್ಟಿಯಿಂದಲೂ ಅಂಥಾ ಶಾಸ್ತ್ರಕಾರರ ಮಾರ್ಗವನ್ನೇ ಸಾಧ್ಯವಿರುವ ಮಟ್ಟಿಗೂ, ಅನುಸರಿಸಿದ್ದೇನೆ.

ಈ ಗ್ರಂಥವನ್ನು ಅಮೂಲಾಗ್ರ ಪರಿಶೀಲಿಸಿ ಪ್ರಮಾದ ವಶಾತ್ ಉಂಟಾಗಿರುವ ದೋಷಗಳನ್ನು ತಿದ್ದುವಂತೆ ತೋರಿಸಿಯೂ, ತಿದ್ದಿಯೂ ಶ್ರಮವಹಿಸಿದ ವಿದ್ವಾನ್ ಶ್ರೀ। ಸೇಡಿಯಾಪು ಕೃಷ್ಣ ಭಟ್ಟರ ವಿಷಯದಲ್ಲಿಯೂ, ಈ ಗ್ರಂಥದ ಪ್ರಕಾಶಕರಾದ ಶ್ರೀ ಕಾರಂತರ ಸಂದರ್ಭೋಚಿತ ಸಹಾಯಕ್ಕೂ ನಾನು ಅತ್ಯಂತ್ಯ ಕೃತಜ್ಞನಾಗಿದ್ದೇನೆ.

ಓದುಗರು ಮುಂದೆ ಕಾಣಿಸಿದ ಶುದ್ಧಾ-ಶುದ್ಧ ಪತ್ರಿಕೆಯನ್ನು ನೋಡಿಕೊಳ್ಳುವದಲ್ಲದೆ, ಕೈಬಿಟ್ಟು ಹೋಗಿರಬಹುದಾದ ಇತರ ದೋಷಗಳು ಕಂಡುಬಂದಲ್ಲಿ ದಯವಿಟ್ಟು ತಿಳಿಸಬೇಕಾಗಿ ಪ್ರಾರ್ಥಿಸುತ್ತೇನೆ.

**ಕಂದ ।** ಎನ್ನೀ ಕಬ್ಬದ ಬಗೆಗಂ ।
ಕನ್ನಡಿಗರ್ ತಾಮೆತನ್ಮೊಳಾಡುವ ನುಡಿಯಂ ॥
ಮುನ್ನಡಿಯೆಂದರಿದಾನಿದ- ।
ಕಿನ್ನೊಬ್ಬನನರಸಿ ನುಡಿಸಿ ಬರೆಯಿಸದಾದೆಂ ॥

ಬಡೆಕ್ಕಿಲ.
1—6—46.

ಇತಿ,
ಗ್ರಂಥಕರ್ತ.

## ---ಶುದ್ಧಾ-·-ಶುದ್ಧ ಪತ್ರಿಕೆ-·-

| ಪುಟ | ಪದ್ಯ | ಚರಣ | ಅಶುದ್ಧ | ಶುದ್ಧ |
|---|---|---|---|---|
| 9 | 4 | 1 | ಸೈನ್ಯ ಸನ್ಯ | ಸೈನ್ಯಸೈನ್ಯಾ |
| 7 | 4 | 4 | ತರದಲಿ | ತರಲಿ |
| 9 | 1 | 4 | ಮೆಯ್ | ಮೆಯ್ |
| 15 | 2 | 1 | ನಿನೇ | ನೀನೇ |
| 15 | 3 | 2 | ಲಾಗದು | ಲಾಗದುದ |
| 21 | 2 | 5 | ವೈಧಿಕರ | ವೈದಿಕರ |
| 19 | 3 | 3 | ಯದ್ಧ | ಯುದ್ಧ |
| 23 | 4 | 2 | ಳಲಸೆ | ಳಲಸ |
| 23 | 4 | 4 | ರನುಸಮುಪದಕೆ | ರನುಪಮು ಪದಕೆ |
| 24 | 2 | 3 | ನೆತಂತಾರ | ನೆಂತಂತಾರ |
| 26 | 1 | 6 | ಕಲ್ದಪುದು | ಕಲ್ತಪುದು |
| 26 | 1 | 2 | ಲೆಂದನೇ | ಲೊಂದನೇ |
| 28 | I | 6 | ಳೂಂದನೆ | ಳೊಂದನೆ |
| 30 | 3 | 4 | ಕೃತು | ಕ್ರತು |
| 33 | 1 | 6 | ಕೈಯ್ಗಾಡ | ಕೈಗೂಡ, ಕೈಯ್ಗೂಡ |
| 33 | 3 | 5 | ಪನ್ನೆ | ಸನ್ನೆ |
| 34 | 4 | 6 | ಸವಾ ಸಾವೆ | ಸಾವಾ ಸಾವೆ |
| 35 | 4 | 3 | ಮಿಗಿನೆ | ಮಿಗಿಲೆ |
| 38 | 3 | 5 | ಜನ್ನಂ | ಜನ್ಮಂ |
| 47 | 3 | 4 | ಮಾಳ್ವಾತಂಗೆ | ಮಾಳ್ಪಾತಂಗೆ |
| 48 | 1 | 5 | ಬಹ್ಮ | ಬ್ರಹ್ಮ |
| 52 | 3 | 5 | ಶಮು | ಶಮುವೆ |
| 58 | 2 | 3 | ವೆರಡಲಿ | ವೆರಡರಲಿ |
| 58 | 4 | 6 | ಪದವನು | ಪದದಲಿ |
| 93 | 1 | 3 | ಕೈಗೆದೆ | ಕೈಗೈದೆ |

ಧರಣಿಪತಿ ಎಂದಿರುವಲ್ಲಿ ಧರೆಯಧಿಪ ಎಂದು ಓದಿಕೊಳ್ಳತಕ್ಕದ್ದು---

ಶ್ರೀ

॥ ಕೃಷ್ಣಾಯ ಪರಬ್ರಹ್ಮಣೇ ನಮಃ ॥

# ಗೀತಾ ಸಾರ

## ಪೀಠಿಕಾಸಂಧಿ

ಭಾ। ಷ। ಶ್ರೀರಮಣ ಕರುಣಾಭರಣ ಸುರ ।
ವಾರವಂದಿತ ಚರಣ ಭವ ಭಯ ।
ದೂರ ನಿರ್ಗುಣ ನೀರಜೇಕ್ಷಣ ದೈತ್ಯಕುಲ ಹರಣ ॥
ಚಾರುಗುಣ ಪರಿಪೂರ್ಣ ಫಲ್ಗುಣ ।
ಸಾರಥಿಯೆ ಸಲಹೆನ್ನ ನೀ ಸಂ ।
ಸಾರ ರಥ ಚೋದನಕೆ ಸಾರಥಿಯಾಗಿ ಶ್ರೀಕೃಷ್ಣ ॥ ೧ ॥

ಮಂಗಳಾಂಗಿ ಮನೋಜ್ಞೆ ಮಾಯಾ ।
ಸಂಗ ವರ್ಜಿತೆ ಸುಖದೆ ಕರುಣಾ ।
ಪಾಂಗೆ ಕಾಮಿತದಾತೆ ಕಂಜಾಸನೆ ಚಿದಾಭಾಸೆ ॥
ಅಂಗ ಭಂಗಿಯನೆನ್ನ ನಾಲಗೆ ।
ಯಂಗಣದಿ ನಲಿದಾಡಿ ತೋರಿ ಸು ।
ರಾಂಗನಾ ನುತಚರಣೆ ಭಾಷಾರಮಣಿ ನೀನೊಲಿದು ॥ ೨ ॥

ನುಡಿಯೊಳರ್ಥ ತದರ್ಥದೊಳುನುಡಿ ।
ಬಿಡಗುವಡೆದವೊಲಿರ್ದು ವಿಶ್ವವ ।
ಹಡೆದು ಜಗತೀತಲಕೆ ಜನನೀಜನಕರಾಗಿರ್ದು ॥
ಎಡೆ ಬಿಡದೆ ಸಲಹುವ ಮೃಡಾನೀ ।
ಮೃಡರು ರಕ್ಷಿಸುದೆನ್ನಭೀಷ್ಟವ ।
ಕೊಡುವುದೆಂದಾನೆರಗಿ ಬೇಡುವೆನವರ ಚರಣದಲಿ ॥ ೩ ॥

ತನ್ನ ಕರ್ತವ್ಯವನು ತಿಳಿಯದೆ ।
ಖಿನ್ನನಾದರ್ಜುನಗೆ ಕೃಪೆಯಿಂ ।
ಪನ್ನಗಾರಿವರೂಥನುಸಿರಿದ ಕರ್ಮಯೋಗವನು ॥
ಕನ್ನಡದಿ ಕನ್ನಡಿಸ ಬೇಕೆಂ ।
ಬೆನ್ನ ಮನದೆಣಿಕೆಯನು ಸಕಲಾ ।
ಪನ್ನಿವಾರಣ ವಾರಣಾನನ ಜನಕ ಕೈಗೊಳಿಸು ॥ ೪ ॥

ಲೋಕದೊಳಗುಳ್ಳಖಿಳ ಭಾಷಾ ।
ನೀಕದೊಳು ಹರಿ ಗೀತೆಗಾದುದ ।
ನೇಕ ಸುವ್ಯಾಖ್ಯಾನ ಭಾಷ್ಯಾರ್ಥಂಗಳಲ್ಲಲ್ಲಿ ॥
ಏಕೆ ಪೊಸತಿನ್ನೊಂದನಿದನಿ ।
ನ್ನೇಕೆ ಬರೆದನೊ ಕಾಣೆವೆನದೆ ವಿ ।
ವೇಕಶಾಲಿಗಳಿದನು ನೋಡುವುದೊಮ್ಮೆ ನಲ್ಮೆಯಲಿ ॥ ೫ ॥

ಉಪ್ಪುಹುಳಿಸಿಹಿಕಾರ ಕಹಿಯೊಗ ।
ರಪ್ಪ ರಸವಾರವುಗಳಿಂದಿನಿ ।
ದಪ್ಪ ಬಹು ವಿಧಪಾಕಗಳು ಪಾಚಕ ನಿನಾದಂತೆ ॥
ಇಪ್ಪುದೆಂತಾ ಕಬ್ಬಿಗನ ಮತಿ ।
ಯಪ್ಪುದಂತಾ ಕಾವ್ಯಪಾಕವ ।
ದೊಪ್ಪಿ ನವರಸದಿಂದ ವಿಷಯುವದೊಂದೆ ಪಲವಾಗಿ ॥ ೬ ॥

ಎಲ್ಲಿ ಶ್ರೀ ಹರಿ ನುಡಿಯಸುಧೆ ಮ ।
ತ್ತೆಲ್ಲಿ ಸಾತ್ಯವತೇಯ ಮುನಿಪನ ।
ಸೊಲ್ಲು ಗೀತಾ ಸೂತ್ರ ರಮ್ಯ ಸುವಾಣಿ ಗೈರ್ವಾಣಿ ॥
ಎಲ್ಲಿ ಕನ್ನಡ ಕಬ್ಬವೆಂದಿದ ।
ನಲ್ಲಗಳೆಯದೆ ಕಂಡಿಯನು ಸೇ ।
ರ್ಗಲ್ಲೊಳಾಂ ತೂಗಿದುದನೆಲ್ಲರು ಬಿಡದೆನೋಡುವುದು ॥ ೭ ॥

ತುರುಗಳುಪನಿಷದಂಗಳಿನಿವಾ ।
ಲ್ಗರೆದವನು ಗೋವಿಂದನೆಳಗರು ।
ನರನದೇನೊರೆಹಾಲು ಹರಿಗೀತಾ ಸುಧಾಪಾಕ ॥
ಅರಿತು ಸೇವಿಸುವವರು ತೃಷ್ಣಾ ।
ಭರಿತ ಭವ ರೋಗಂಗಳನು ಪರಿ ।
ಹರಿಸಿ ನಿಲ್ವರೆನಲ್ಕೆ ಬಣ್ಣಿಸಿಬರೆವರಾರದನು ॥ ೮ ॥

ಆದಿ ಕವಿ ವಾಲ್ಮೀಕಿ ಪಂಚಮ ।
ವೇದಕೃತಮತಿಮಹಿತನಾಮುನಿ ।
ಬಾದರಾಯಣನವರ ಪಾದಾಂಬುಜಕೆ ತಲೆವಾಗಿ ॥
ಆದ ಕನ್ನಡ ಕವಿಗಳೊಳು ಹೆಸ ।
ರಾದವರ ನೆನೆ ನೆನೆದು ಪೇಳುವೆ ।
ನಾದಯಾನಿಧಿಕೃಷ್ಣ ಪೇಳಿಸಿದಂತು ಮುದವಾಂತು ॥ ೯ ॥

ಗುರುಮುಖದಿ ಸಕ್ಕದವ ಕಲಿತಾ ।
ನರಿಯೆನರಿಯೆನು ಲಾಕ್ಷಣಿಕರಿಂ ।
ತೊರೆದರಾ ಲಕ್ಷಣಗಳಿಂದ ಲೆರಚಿಸಿತೋರಿಪೊಡೆ ॥
ಭರಿತನಲ್ಲಧ್ಯಾತ್ಮ ಶಾಸ್ತ್ರದ ।
ಪರಿಮಿತಿಯೊಳೆ ನಲಿದನು ಶ್ರೀನರ ।
ಹರಿಯೆ ನುಡಿಸುವನಲ್ಲದೆನಗೆತ್ತಣದು ಸುಜ್ಞಾನ ॥ ೧೦ ॥

ಕೊಂದವರ ಸತ್ತವರ ಬಹುಪರಿ ।
ಯಿಂದ ಸುಖದುಃಖೋಪಭೋಗಕೆ ।
ಸಂದವರ ಕಾಮುಕರ ಬರಿಬಣ್ಣನೆಯದಲ್ಲವಿದು ॥
ಬಂದು ನರದೇಹದಲಿ ನರನಿವ ।
ನೆಂದುದರ ಸಫಲತೆಗೆ ಕರ್ಮದ ।
ಹೆಂದರದಿ ಮುಕ್ತ್ಯಂಗನೆಯ ಕೆಯ್ಗೊಳಿಸಲಿಹ ಸೂತ್ರ ॥ ೧೧ ॥

ಹಕ್ಕಿಹಾಡಿತು ಹಾವು ಹರಿಯಿತು ।
ಬೆಕ್ಕುಕೂಗಿತು ಬೇವು ಬಾಗಿತು ।
ನೆಕ್ಕಿಚಿಗುರಿತು ನೆಲ್ಲಿಯೊಣಗಿತು ಥಕ್ಕಥೈಯೆಂಬ ॥
ಮಕ್ಕಳೋದಿಗು ಸಲದ ಪೊಸಕ ।
ಬ್ಬಕ್ಕೆ ನೋಂತರುನೋಡದಿರಲಂ ।
ತಿಕ್ಕೆತಕ್ಕರಬಗೆಗೆ ಬಂದರೆ ಸಾಕು ಸಮವೆನಿಸಿ ॥ ೧೨ ॥

ಬುಧನೆ ವೆಂಕಟರಮಣ ನಾಂ ಹರಿ ।
ಪದಪಯೋಜವ ನೆನೆದುಮತ್ತಿ ।
ನ್ನಿದಕೊಡೆಯಸಾಕ್ರೃಷ್ಣನೆಂಬಭಿಮತವನೇ ಪಿಡಿದು ॥
ಸದಮಲಾತ್ಮ ಧ್ಯಾನಿಗಳ ಸಂ ।
ಗದ ಮಹಾಪುಣ್ಯದಲಿ ಚಿತ್ತದೊ ।
ಳುದಿಸಿದರಿವಿನ ನೆರವಿನಿಂ ಪೇಳುವೆನು ನಲವಾಂತು ॥ ೧೩ ॥

ದೇವಕೀಸುತ ದೇವವಂದಿತ ।
ದೇವ ದೇವೇಶ್ವರ ಸದಾಶಿವ ।
ದೇವ ಪನ್ನಗಮರ್ತ್ಯಲೋಕಾಧ್ಯಕ್ಷ ಕಮಲಾಕ್ಷ ॥
ಭಾವನಾಮಯ ಭಕ್ತವತ್ಸಲ ।
ಕಾವುದೆನ್ನನು ಮಂಗಲ ಶ್ರೀ ।
ದೇವಿಯುರಸನೆನಿಸ್ತ್ರೃಪ್ತನೆ ದೇವನಿರುಪಮನೆ ॥ ೧೪ ॥

## ೧ನೆಯ ಸಂಧಿ

ಸೂ ‖ ನೋಡಿ ಕುರುಕುಲ ಬಲದೊಡನೆ ಕೈ ।
ಮಾಡುವಿಚ್ಛೆಯನುಳಿದುಕೃಪೆಯಿಂ ।
ಕೂಡಿಕುಳಿತನು ಬಿಲುಗಣೆಯನೀಡಾಡಿದನು ಪಾರ್ಥ ‖

ನಿಂದು ಕಾದುವುದೆಂಬ ನಿಶ್ಚಯ ।
ದಿಂದ ಕುರುಭೂಮಿಯಲಿ ಧುರಕೈ ।
ತಂದ ಪಾಂಡುಕುಮಾರಕರು ಮತ್ಸುತರುಸಹಿತಾಗಿ ‖
ಮುಂದೆ ಮಾಡಿದ ಕಜ್ಜವೇನೆಂ ।
ದಂಥ ನೃಪ ಬೆಸಗೊಳಲು ಸಂಜಯ ।
ನೆಂದನಾ ಭೂಪತಿಗೆ ಕೈಮುಗಿವಧಿಕ ವಿನಯದಲಿ ‖ ೧ ‖

ಅವಧರಿಸು ರಾಜೇಂದ್ರ ಸೇನಾ ।
ನಿವಹದಿಂ ವ್ಯೂಹವನು ವಿರಚಿಸಿ ।
ಭುವನವಿಕ್ರಮರು ಭಯಬಲಪಟುಭಟರು ಕಾಳಗಕೆ ‖
ತವಕಗೊಂಬನಿತರಲಿ ನಿಮ್ಮಯ ।
ಕುವರನೈತಂದೆರಗಿ ಕುಂಭೋ ।
ದ್ಭವನ ಹತ್ತಿರ ನಿಂದು ಬಿನ್ನೈಸಿದನು ಮನದಿರವ ‖ ೨ ‖

ಕಡಮೆಯವನೇ ಬುದ್ಧಿಯಲಿ ನಿ ।
ಮ್ಮಡೆಯ ಶಿಷ್ಯನು ದ್ರುಪದರಾಯನ ।
ಹಡೆದ ಮಗನವನೆಂದವೊಲು ವ್ಯೂಹವನು ಪರುಠವಿಸಿ ‖
ಕಡುಗಿ ವೀರಾವೇಶದಿಂ ನಿಂ ।
ದಡಿವಿಡಿದ ಪಾಂಡವರ ಸೇನೆಯ ।
ಕಡಲಕಂಡಿರೆ ನೋಡಿರೆಂದನು ಕೌರವರರಾಯ ‖ ೩ ‖

ಗಾಢಗರ್ವರ ಭೀಮ ಪಾರ್ಥರ ।
ಕೂಡೆ ಸರಿಮಿಗಿಲೆಂಬ ಯೋಧರ ।
ನೋಡಿರವದಿರ ದ್ರುಪದ ಶೈಬ್ಯವಿರಾಟನೃಪವರರ ॥
ನೋಡಿರಿನ್ನಾಕಾಶಿರಾಜನ ।
ನೋಡಿರಿನ್ನಾಧೃಷ್ಟಕೇತುವ ।
ನೋಡಿರಿನ್ನಿತ್ತುಲುಯುಧಾಮನ್ಯುತ್ತಮೌಜಸರ ॥ ೪ ॥

ಮತಿಯುತರ ದ್ರೌಪದಿ ಸುಭದ್ರಾ ।
ಸುತರ ಸಾತ್ಯಕಿ ಚೇಕಿತಾನಾ ।
ದ್ಯುತಿ ಬಲಾಢ್ಯಮಹಾರಥರ್ಕಳ ನೋಡಿರೆಲ್ಲರನು ॥
ಅತುಲ ಸೈನ್ಯವನದನುಮಾರುತ ।
ಸುತನೆ ರಕ್ಷಿಸುತಿಹನು ಬಲವದು ।
ಮಿತಿಗೆ ಮಿಕ್ಕದು ನಮ್ಮವರ ನಿನ್ನೊಮ್ಮೆ ನಿರುಕಿಪುದು ॥ ೫ ॥

ಹೇಳುವೊಡೆ ನೀವಿನ್ನುಸಮರಾ ।
ಭೀಳಭೀಷ್ಮವಿಕರ್ಣಕರ್ಣನೃ ।
ಪಾಳ ಭೂರಿಶ್ರವ ಕೃಪಾಶ್ವತ್ಥಾಮ ಮುಂತಾದ ॥
ಕಾಳಗದ ಕಡುಗಲಿಗಳಲ್ಲದೆ ।
ತೋಳಬಲುಹುಳ್ಳನ್ಯ ಪೃಥ್ವೀ ।
ಪಾಳರಿಹರೆನಗಾಗಿ ಜೀವವ ಕೊಡುವ ಪಟುಭಟರು ॥ ೬ ॥

ಅಪರಿಮಿತ ನಿಜ ಸೈನ್ಯಸನ್ಯಾ ।
ಧಿಪರು ಮುಂತಾದೆಲ್ಲರನು ರ ।
ಕ್ಷಿಪ ಮಹಾಕಾರ್ಯವನುಕೈಗೊಂಡಸಮವಿಕ್ರಮನ ॥
ರಿಪುಭಯಂಕರ ಭೀಷ್ಮನಂ ರ ।
ಕ್ಷಿಪುದು ನೀವೊಂದಾಗಿ ನಿಮ್ಮಯ ।
ನಿಪುಣತನದಿಂದೆಮ್ಮವ್ಯೂಹ ದ್ವಾರವನುಕಾಯ್ದು ॥ ೭ ॥

ಕುಲಜರುತ್ತಮ ಶಸ್ತ್ರವಿದ್ಯಾ ।
ಬಲಯುತರು ನೀವಿಂತು ನಮ್ಮನು ।
ಸಲಹಬೇಕೆನಲಿತ್ತ ಸಿಂಹಧ್ವಾನವನುಗೈದು ।
ಬಲಿದುಶಂಕವನೂದಿದನು ಕುರು ।
ಕುಲ ಪಿತಾಮಹನಖಿಳವಾದ್ಯಾ ।
ವಲಿಗಳುಲಿದವು ಘೋರ್ಗರೆದುಕಿವುಡಿಕ್ಕಿ ಮಾರ್ಬಲವ ॥ ೮ ॥

ಆ ಮಹಾರವವಳ್ಳಿರಿಯೆ ಶ್ರೀ ।
ಭಾಮಿನೀಪತಿ ಪಾಂಚಜನ್ಯವ ।
ನಾ ಮಹೀಪತಿ ಧರ್ಮಪುತ್ರನನಂತ ವಿಜಯವನು ॥
ಭೀಮನುನ್ನತ ಪೌಂಡ್ರವನು ಸು ।
ತ್ರಾಮಸುತನಾ ದೇವದತ್ತವ ।
ನಾಮಹಾಂಬುಧಿ ಘೋಷಮೆನಿಪಂತೂದಿದರು ಬಿಡದೆ ॥ ೯ ॥

ಪ್ರಕಟಿಸಿದರು ಸುಘೋಷಮಣಿ ಪು ।
ಷ್ಪಕಗಳುರು ಗೋಸಣೆಯನಾಗಳೆ ।
ನಕುಲ ಸಹದೇವರ್ಕಳುಳಿದ ಮಹಾರಥರು ನೆರೆದು ॥
ಸಕಲರಿಪು ವಾಹಿನಿಗಳೆದೆ ಬಿದ ।
ರಿಕೆಯಿದೆನೆ ತಂತಮ್ಮ ಶಂಖ ।
ಪ್ರಕರಗಳ ಪಿಡಿದೂದಿ ಕೇಳಿಸಿದರು ಮಹಾಸ್ವನವ ॥ ೧೦ ॥

ತುಂಬಿತಾ ನಿರ್ಘೋಷವೀಭೂ ।
ಮ್ಯಂಬರವನರಿರಾಯರೆದೆಜುಂ ।
ಮೆಂಬೊಲಾದುದು ಸಾಸಿಗರು ನಿಜ ಸಮರಕನುವಾಗಿ ॥
ಇಂಬುಗೊಂಬನಿತರದಲಿ ಫಲ್ಗುಣ ।
ನಂಬುರುಹ ಲೋಚನನ ಚಾರುಪ ।
ದಾಂಬುಜಕೆ ತಲೆವಾಗಿ ನುಡಿದನು ವಿನಯವಚನದಲಿ ॥ ೧೧ ॥

ಆರೊಡನೆ ಕಾದುವುದು ನೆರೆದವ ।
ರಾರು ದುರ್ಮತಿಕೌರವನ ಕಡೆ ।
ಗಾರುಬಂದಿಹರೆತ್ತಣವರೇಗೆಯ್ವರೆಂಬುದನು ॥
ಆರಯಲುಬೇಕದಕೆ ನಮ್ಮಿ ।
ತೇರನಿತ್ತಂಡಗಳ ಮಧ್ಯದೊ ।
ಳಾರಥಿಕರಿದಿರಾಗಿ ನಿಲಿಸುವ ಕೃಪೆಯಮಾಡೆಂಪ ॥ ೧೨ ॥

ಎಂದ ಪಾರ್ಥನ ನುಡಿಗೆ ಸಂತಸ ।
ದಿಂದ ಕರುಣಾಸಿಂಧು ತಾನಾ ।
ಸ್ಯಂದನವನೋಡಿಸಿದನೊಂದೇ ನಿಮಿಷಮಾತ್ರದಲಿ ॥
ತಂದುನಿಲಿಸಿದನೆಂದವೊಲು ಸುರ ।
ಸಿಂಧುಸುತ ದ್ರೋಣಾದಿಗಳ ನೋ ।
ಡೆಂದು ತೋರಿದನಾ ಮಹಾವಿಖ್ಯಾತವಿಕ್ರಮರ ॥ ೧೩ ॥

ಪರ ಬಲವನೋಡಿದನು ಫಲುಗುಣ ।
ನುರವಣಿಪ ಸೇನಾಧಿನಾಥರ ।
ತಿರುಗಿನೋಡಿದನೊಮ್ಮೆ ತಮ್ಮಯ ಸೈನ್ಯತಿಂಥಿಣಿಯ ॥
ಹಿರಿವೆನಾರೊಳು ಶಸ್ತ್ರವನು ಗುರು ।
ಹಿರಿಯರಾಚಾರ್ಯರು ನಿಜಾಪ್ತರು ।
ಹಿರಿಕಿರಿಯತಾತಂದಿರಣುಗರು ಸಹಜರಗ್ರಜರು ॥ ೧೪ ॥

ಪರಮಮಿತ್ರರು ಮಾವ ಭಾವಂ ।
ದಿರುಗಳಲ್ಲದೆ ಮಿಕ್ಕವರು ಗೋ ।
ಚರಿಸರಿವರೊಳು ವೈರವೇ ಸಂಗರವೆ ಹಾ ಕೃಷ್ಣ ॥
ಕರುಣನಿಧಿ ಹೇಳೆಂದುಗದ್ಗದ ।
ವೆರಸೆ ಕಣ್ಣೀರಿಟ್ಟು ಮಮ್ಮಲ ।
ಮರುಗಿ ಬಿಸುಸುಯ್ಯುತ್ತ ಮೆಲ್ಲನೆ ನುಡಿದನಾಪಾರ್ಥ ॥ ೧೫ ॥

ಕಾದುವೊಡೆ ನೆರೆದವರಿವರು ಬೇ ।
ಕಾದವರು ಕಾದುವೆನದೆಂತೈ ।
ಮಾಧವನೆ ಕಂಗಾಣದೀಸಂಗ್ರಾಮ ಮಾರ್ಗದಲಿ ॥
ಕಾದಕಬ್ಬಿಣದೋಲು ಮೆಯ್ಯುಬ್ಬಿಸಿ ।
ಯಾದುದೆದೆಗುಂದಿದುದು ಕಾಲ್ಗೈ ।
ಗಾದುದಗ್ಗದ ನಡುಕು ಬಾಯ್ಗಂಟಲುಗಳೊಣಗಿದುವು ॥ ೧೬ ॥

ಎದ್ದು ನಿಲ್ಲು ಪೊಡಾರೆ ಕೈಯ್ಯಿಂ ।
ಬಿದ್ದಪುದು ಗಾಂಡೀವ ಧನು ಸ ।
ನ್ನದ್ಧನಪ್ಪುದೆ ನಮ್ಮವರ ನಾನಿಂತು ಕೊಲುವುದಕೆ ॥
ಉದ್ಧರಿಸು ಚಿಂತಾ ಸಮುದ್ರದಿ ।
ಬಿದ್ದೆನೈ ತಡಿಗಾಣೆನಮಮಾ ।
ಬುದ್ಧಿಗೆಟ್ಟಿನು ಕಂಡೆನಪಶಕುನವ ಮುರಾಂತಕನೆ ॥ ೧೭ ॥

ರಾಕ್ಷಸಾಂತಕ ಕೃಷ್ಣ ವಿಜಯಾ ।
ಪೇಕ್ಷೆಯಿಲ್ಲೆನಗಿನಿತು ನೆಲವನ ।
ಪೇಕ್ಷಿಸೆನು ನೃಪ ಭೋಗಸೌಖ್ಯಾದಿಗಳನಾಶಿಸೆನು ॥
ಈಕ್ಷಿತಿಯೊಳಿನ್ನೇನು ಸೌಖ್ಯಾ ।
ಪೇಕ್ಷೆಯೊಳಗೇನಿಹುದು ಜೀವವ ।
ರಕ್ಷಿಸುತ ಬದುಕಿರ್ದುಮಾಡುವುದೇನು ಗೋವಿಂದ ॥ ೧೮ ॥

ಆರಿಗೀ ರಾಜ್ಯವನು ಗಳಿಸುವೆ ।
ನಾರಸುಖವನು ಬಯಸುವೆನು ಮ ।
ತ್ತಾರ ಸಲಹುವೆನವರೆ ಜೀವಾರ್ಥಾಭಿಲಾಷೆಯನು ॥
ಮಾರುಗೊಟ್ಟೀಧುರಕೆ ನಿಂದರು ।
ಮೀರಿಕಾದುವೊಡಾರೆನಾ ಸಂ ।
ಸಾರಿಯಲ್ಲವೆ ಕೃಷ್ಣಯುದ್ಧೋದ್ಯಮದಿ ಮನವಿಡೆನು ॥ ೧೯ ॥

ಕಾಡುಪಾಲಾದೆಮ್ಮಕನಿಕರ ।
ಗೂಡಿ ಕರೆತಂದಾಧರಿಸಿ ಕೃಪೆ ।
ಮಾಡಿ ಬುದ್ಧಿಯನರುಹಿ ನಯನೀತಿಗಳ ನೆರೆತಿಳುಹಿ ॥
ಮೂಡಿದಪರಾಧಕ್ಕೆ ಮನ್ನಣೆ ।
ಮಾಡಿಬಿಟ್ಟಜ್ಞನೊಳು ಖಾಡಾ ।
ಖಾಡಿಯೇ ಹಾ ಕೃಷ್ಣಯೋಚಿಸಲಾರೆನಿದನೆಂಡ ॥ ೨೦ ॥

ಹಿಡಿಸಿ ಬಿಲ್ಲನುಕೆಯ್ಗೆ ಬಾಣವ ।
ತೊಡಿಸುವಂದವ ತೋರಿಬುಡದಿಂ ।
ಕಡೆತನಕ ಪೇಳ್ದಿಂತು ವಿದ್ಯಾಪರಿಣತನಮಾಡಿ ॥
ಹಡೆದಮಗನಂತೆನ್ನ ನಿಚ್ಚದಿ ।
ನಡಸಿ ನಚ್ಚಿದ ಕುಂಭ ಸಂಭವ ।
ನೊಡನೆ ಕದನವೆ ಗುರುವಲಾ ತಾನಕಟಶಕಟಾರಿ ॥ ೨೧ ॥

ಭಾವಸೈಂಧವನೆಮಗೆ ಸೋದರ ।
ಮಾವ ಮದ್ರೇಶ್ವರನು ಕೃಪ ಭೂ ।
ದೇವನಾಚಾರ್ಯನು ಮಹಾಮಂತ್ರಜ್ಞನುತ್ತಮನು ॥
ಭಾವಜಾಂತಕ ಸತ್ವನಿರ್ಮಲ ।
ಭಾವನಶ್ವತ್ಥಾಮನಿವರೊಳು ।
ದೇವ ಸಂಗರವೇಕೆ ಮತ್ತ್ಯನೇಕೆ ಹೇಳೆಂದ ॥ ೨೨ ॥

ನಿಲುವೆನೆಂತಿದಿರಾಗಿ ಸಮರದಿ ।
ಕೊಲುವೊಡೆನ್ನನೆ ಕೊಲ್ಲಲಿವರೀ ।
ನೆಲದ ಮಾತೇಂ ಮೂರುಲೋಕದ ರಾಜ್ಯಸಂಪದಕೆ ॥
ಸಲುವೆನಾದರು ಗುರು ಹಿರಿಯರನು ।
ಕೊಲುವನಲ್ಲಾಂ ಕೌರವಾದ್ಯರ ।
ಕಲಹಕಾನುವನಲ್ಲ ಮರುಮಾತಿಲ್ಲ ಮುರಮಥನ ॥ ೨೩ ॥

ಆತತಾಯಿಗಳಹುದು ಕುರು ಸಂ ।
ಜಾತರಿವರನು ಕೊಂದೊಡಾರಿಗೆ ।
ಪ್ರೀತಿಯಪ್ಪುದು ಕೊಲುವೆನೆಂತೆಮ್ಮವರ ಹಗೆಗೊಂಡು ॥
ಪಾತಕವಲಾ ಕೃಷ್ಣ ಛಲದಿಂ ।
ಘಾತಿಸಲು ಸುಖವಹುದೆ ಕೌರವ ।
ನಾಥಮುಖ್ಯರ ಕೊಲುವುದುಚಿತವೆ ದೇವಹೇಳೆಂದ ॥ ೨೪ ॥

ಹಲವು ಮಾತಿನ್ನೇಕೆ ಲೋಭಾ ।
ಕಲಿತಮಾನಸರವರ ಬುದ್ಧಿಗೆ ।
ಕುಲವಿನಾಶನ ದೋಷ ಮಿತ್ರದ್ರೋಹಪಾಪಗಳು ॥
ನಿಲುಕದಿರೆ ನಾವೇಕೆ ನಮ್ಮಯ ।
ಕುಲಹರಣವಹ ಘೋರಕಾರ್ಯವ ।
ನಿಲಿಸಲಾಗದು ತಿಳಿವೆವೈಸಲೆ ಪುಣ್ಯಪಾಪಗಳ ॥ ೨೫ ॥

ಕುಲವಿನಾಶನವಾದೊಡದರಿಂ ।
ಕುಲಸನಾತನ ಧರ್ಮವಳಿವುದು ।
ಕುಲಸನಾತನ ಧರ್ಮವಳಿದೊಡಧರ್ಮವಾಕುಲದಿ ॥
ನೆಲೆಯನಾಂಪುದಧರ್ಮ ಕುಲದಲಿ ।
ನೆಲಸಿದರೆ ಕುಲಲಲನೆಯರು ನಿ ।
ರ್ಮಲೆಯರಪ್ಪರೆ ಕೃಷ್ಣ ಕೆಡರೇಹೇಳು ನೀನೆಂದ ॥ ೨೬ ॥

ಕೆಟ್ಟರಾಕುಲಸತಿಯರವರಿಂ ।
ಪುಟ್ಟುವರು ಕುಲಗೇಡಿಗರು ಕುಲ ।
ಗೆಟ್ಟವರ ದೆಸೆಯಿಂದ ಸಂಕರವಹುದು ವರ್ಣಚಯ ॥
ಕೊಟ್ಟು ಪಿಂಡೋದಕಗಳನು ಸಂ ।
ತುಷ್ಟಿಗೊಳಿಸುವರಿರದೆ ಸದ್ಗತಿ ।
ಗೆಟ್ಟುಧೋಗತಿಯಾಗ ಪಿತೃಸಂಹತಿಗೆ ಸಮನಿಸದೆ ॥ ೨೭ ॥

ಪರಕುಲಜರಳಿಗೊಂಡರೆನೆ ಸಂ।
ಕರ ಕುಲಜರಿಂ ವಂಶಧರ್ಮೋ।
ತ್ಕರ ಮಹೀರುಹ ಮುಡಿದು ತಾಯ್ಬೇರ್ವೆರಸು ಬಿದ್ದಪುದು ॥
ಹರಣಗೊಂಡಾನೆನ್ನ ಕುಲ ಸಂ।
ಹರಣಪಾತಕಿಯಹೆನೆ ನಿರಯದಿ।
ನಿರತ ಮನೆಮಾಡುವೆನೆ ಧರ್ಮಭ್ರಷ್ಟನೆಂದೆನಿಸಿ ॥ ೨೮ ॥

ಎಮ್ಮ ಸುಖವನು ಗಳಿಸುವಾಸೆಯೊ।
ಳೆಮ್ಮವರ ಕೊಲುವೆನೆ ಮಹಾದು।
ಷ್ಕರ್ಮವಿದನಾಚರಿಸುವೆನೆ ತಿಳಿತಿಳಿದು ವೈರದಲಿ ॥
ದುರ್ಮತಿಗಳವರೊಳಗೆ ಕಳನೊಳು।
ಸುಮ್ಮನಿಹ ಬರಿಗೆಯ್ಯನೆನ್ನನು।
ಹೊಮ್ಮಿಹೊಡೆವೊಡೆ ಹೊಡೆಯಲದರಿಂ ಕ್ಷೇಮವೆನಗಹುದು ॥ ೨೯ ॥

ಜನಪ ಚಿತ್ತಯಿಸಿಂತು ಚಿಂತಾ।
ಜನಿತ ನಿರ್ಭರಚಿತ್ತನಾಗಳೆ।
ಧನುಶರವನೀಡಾಡಿ ಕುಳಿತನು ನರನವನರಥದಿ ॥
ಚಿನುಮಯಾತುಮ ಮಂಗಲ ಶ್ರೀ
ವನಿತೆಯಾಣ್ಮ ಮಹಾಮಹಿಮ ಸ।
ಜ್ಜನಕುಲೋದ್ಧಾರಕನು ನೋಡಿದನಾ ಧನಂಜಯನ ॥ ೩೦ ॥

## ೨ನೆಯ ಸಂಧಿ

**ಸೂಚನೆ** ॥ ನಳಿನಲೋಚನನೊಲಿದು ಪಾರ್ಥಗೆ ।
ತಿಳುಹಿದನು ವರ ಸಾಂಖ್ಯಯೋಗಂ ।
ಗಳನು ವಿಸ್ತಾರದಲಿ ಕುಲಧರ್ಮವನು ಸಹಿತಾಗಿ ॥

ಕುಂಭಿನೀಪತಿ ಚಿತ್ತಯಿಸು ನೀ ।
ರ್ದುಂಬಿ ತುಳುಕುವ ಕಣ್ಣನರಿಜನ ।
ರೆಂಬ ಭಾವವನುಳಿದು ಕರುಣಾರಸದ ಹೊನಲಿನಲಿ ॥
ಮುಂಬರಿದು ಕೌರವರ ಹಿತವನೆ ।
ಕಾಂಬ ಮನಸಿನ ಫಲುಗುಣನ ಕಂ ।
ಡಂಬುಜೋದರನೆಂದನಧಿಕಮನೋನುರಾಗದಲಿ ॥ ೧ ॥

ಏನಿದೇನರ್ಜುನನೆ ಕಲ್ಮಷ ।
ಮಾನಸವ್ಯಾಪಾರವೆತ್ತಣ ।
ದೇನು ಶರಸನ್ಯಾಸದಿಚ್ಛೆಯೆ ವಿಷಮ ಸಮಯದಲಿ ॥
ಏನಿದಾರ್ಯರು ನಗುವ ಪುಣ್ಯೋ ।
ದ್ಯಾನವನುಕಡಿದಗಿವ ನಿನ್ನೀ ।
ಹೀನವೃತ್ತಿಯಕೀರ್ತಿಕರವಲೆ ನಿನಗೆ ನೋಡೆಂದ ॥ ೨ ॥

ಏಳು ಬಿಲುಪಿಡಿದೆಲೆ ಪರಂತಪ ।
ತಾಳು ಧೈರ್ಯವನಳ್ಳೆದೆಯಿಸಿಂ ।
ತಾಳುವುದೆ ವ್ಯಾಮೋಹಚಿಂತಾಪಂಕಿಲೋದಕದಿ ॥
ಕೋಳುಗೊಂಡುದೆ ಶೌರ್ಯಶಿಖಿ ಕ ।
ಟ್ಟಾಳುತನ ಹುದುಗಿದುದೆ ಪೌರುಷ ।
ದೂಳಿಗಕೆ ಕಡೆಯಾಯ್ತೆ ಭಯವಿಂತೇಕೆ ಹೇಳೆಂದ ॥ ೩ ॥

ಮಧುಮಥನ ಚಿತ್ತಯಿಸು ಗಂಗಾ ।
ನದಿಯಣುಗ ದ್ರೋಣಾದಿ ಗುರುಜನ ।
ರಿದಿರು ನಿಂದೆಸುಗೆಯಲಿ ಘಾತಿಸಿ ಗೆಲಿದು ನೃಪನೆನಿಸಿ ॥
ಬದುಕಿಬಾಳುವೆಗೊಂಬ ಸುಖಸಂ ।
ಪದವನಾರ್ಜಿಪ ಪೌರುಷಕೆ ಕಡೆ ।
ಯೊದಗಲದರಿಂದೇನು ತೀರ್ಚುವೆ ಹೆಸಿವ ತಿರಿದುಂಡು ॥ ೪ ॥

ಭರಿತ ಸತ್ವಸ್ಥರು ಮಹಾತ್ಮರು ।
ಗುರುಗಳವರನು ಕೊಂದವರ ನೆ ।
ತ್ತರುಬೆರೆದ ಸುಖ ಭೋಗಗಳನುಣಬೇಡವೇ ಕಡೆಗೆ ॥
ಅರಿಗಳೊಡೆವೆರೆದರ್ಥಕಾಂಕ್ಷಾ ।
ಪರರವರು ಸತ್ತುರಿಯಲೆಂದರು ।
ಹರಿಸಲಪ್ಪುದೆ ಪಾತಕವನೀಜನ್ಮವಿರುವನಕ ॥ ೫ ॥

ಅವರ ನಾವೇಗೆಲುವುದೊಳ್ಳಿತೊ ।
ಬವರದೆಡೆಯಲಿ ನಮ್ಮನೇ ಮ ।
ತ್ತವರು ಗೆಲ್ಲುವುದೊಳಿತೊ ಕೀಳ್ಮೇಲೆಂತೊ ತಿಳಿಯೆನಲ ॥
ಭುವನದೊಳಗಿನ್ನಾರ ಹೆಸರಡ ।
ಗುವೊಡೆ ಬದುಕಿರಲೊಲ್ಲೆವೋ ನೋ ।
ಡವರೆ ಬಂದಿದಿರಾಗಿ ನಿಂದರು ಕೌರವಾದಿಗಳು ॥ ೬ ॥

ಆಡಲರಿಯೆನು ಬಾಯೊಳಾಂ ತಿಳಿ ।
ಗೇಡಿಯಾದೆನು ಧರ್ಮಮಾರ್ಗದೊ ।
ಳೋಡದೆನ್ನಯ ಚಿತ್ತ ನಿಜಕರ್ತವ್ಯವೆಂತೆಂದು ॥
ಮಾಡಲರಿಯೆನು ದೇವನೀಂ ಕೃಪೆ ।
ಮಾಡಿತಿಳುಹೈ ಶಿಷ್ಯನೆಂದೇ ।
ನೋಡಿ ಶ್ರೇಯೋಮಾರ್ಗವನು ಗುರುನಾಥ ಶ್ರೀಕೃಷ್ಣ ॥ ೭ ॥

ಸುಟ್ಟು ದೇಹೇಂದ್ರಿಯಗಳನು ಗುಡಿ ।
ಗಟ್ಟಿದೀ ಶೋಕಾಗ್ನಿಯಿಂ ಮರ ।
ಪಟ್ಟುದೆನ್ನಮನಂ ಮನುಷ್ಯ ಸುರಾದಿ ಲೋಕಗಳ ॥
ಪಟ್ಟವಣೆಗಾನೇರಿದರು ಸೊಗ ।
ವಟ್ಟು ಸಂತಸದರಿಕೆಗೊಳ್ಳದು ।
ಸಿಟ್ಟಿಯೊಡೆಯನೆ ನಿನ್ನ ವಚನಾಮೃತವನುಣ್ಣದೊಡೆ ॥ ೮ ॥

ಎರಡು ಮಾತಿನ್ನಿಲ್ಲ ನಿನೇ ।
ಶರಣೆನಗೆ ರಣವೆಸಗಲಾರೆನು ।
ಹರಿಯೆ ರಕ್ಷಿಸೆನುತ್ತ ಮೋನಂಗೊಂಡನಾ ಪಾರ್ಥ ॥
ಧರಣಿಪತಿ ಕೇಳಿಂತು ಚಿಂತಾ ।
ಭರದಿ ಮಾನವತಳೆದು ಕುಳ್ಳಿಹ ।
ನರನ ಮೊಗವನು ನೋಡಿ ನುಡಿದನು ಚಕ್ರಿ ನಸುನಗೆಯಿಂ ॥ ೯ ॥

ಅಳುವೆಯೇನೆಲೆ ಪಾರ್ಥ ನೀನಾ ।
ಗಳುವೆಯಳುಗೊಳಲಾಗದು ನೆನೆ ।
ದಳುವೆ ಮನದೊಳು ಬಲ್ಲವರ ತೆರನಂತೆ ಬಾಯೊಳಗೆ ॥
ಅಳುಕದಾಡುವೆ ಹುಟ್ಟು ಸಾವಿಂ ।
ಗಳುವರೇ ಪಂಡಿತರು ನೀನಿದ ।
ರೊಳವನರಿಯದೆ ಬರಿದೆ ದುಃಖಿಸಲಹುದೆ ಹೇಳೆಂದ ॥ ೧೦ ॥

ಇಲ್ಲಿ ನೆರೆದಿಹ ಸಕಲ ಪೃಥ್ವೀ ।
ವಲ್ಲಭಾದ್ಯರು ಸಹಿತ ನೀನಾ ।
ನೆಲ್ಲವರು ಮೊದಲಾಗಿ ಮೊದಲಿದ್ದಿಲ್ಲವೆಂದಿಲ್ಲ ॥
ಬಲ್ಲಿದನೆ ಕೇಳಿನ್ನು ಹುಟ್ಟುವು ।
ದಿಲ್ಲವೆಂದೇನಿಲ್ಲವದರಿಂ ।
ದೆಲ್ಲಿಯದು ವ್ಯಾಮೋಹವೇತರ ಚಿಂತೆ ಹೇಳೆಂದ ॥ ೧೧ ॥

ಹುಟ್ಟಿ ಬಾಲಕನಾಗಿ ಯೌವ್ವನ ।
ಧೃಷ್ಟತೆಯನಾಂತಳ್ಗಿ ಮುದಿಯ ।
ಪ್ಪಷ್ಟರಲಿ ಜೀವಾತ್ಮನೀಹಳತಾದ ಹಣ್ಮೆಯ್ಯಾ ॥
ಬಿಟ್ಟು ಪೊಸ ಮೆಯ್ವಡಿವನಿಂತೀ ।
ಸೃಷ್ಟಿನಿಯಮಕೆ ಮರುಗುವುದೆ ಮತಿ ।
ಗಟ್ಟು ಮಃಖಿಸರಾತ್ಮವಿದರೀ ದೇಹದಳಿವಿಂಗೆ ॥ ೧೨ ॥

ಮನವ ಸುಖದುಃಖಗಳು ಮತ್ತೀ ।
ತನುವ ಶೀತೋಷ್ಣಗಳು ಬಾಧಿಪ ।
ಪಸುದಿನವು ಪಿಷಯಗಳೊಳಿಂದ್ರಿಯನಿಕರವೆಡೆಗೊಳಲು ॥
ಅನಘ ಕೇಳಾಬಾಧೆಗಳ ಬಂ ।
ಧನಕೆ ಸಲ್ಲದೆ ಸ್ಥೈರಿಸಿಂದ್ರಿಯ ।
ಜನಿತವಾದುವು ಗಳಿಗೆಕೊನೆಯುಂಟೆಂದು ನಿಶ್ಚಯಿಸು ॥ ೧೩ ॥

ಆವನವುಗಳ ಬಂಧನಕೆ ಸಲ ।
ನಾವನವುಗಳ ಸಹಿಸಿ ಲೆಕ್ಕಿಸ ।
ನಾವನವುಗಳಶಾಶ್ವತಗಳೆಂಬುದನು ಮರೆತಿರನು ॥
ಆ ವಿಶಾಲಜ್ಞಾನಸಿದ್ಧನೆ ।
ಪಾವನಾಮೃತಪದಕೆ ಸಲುವನು ।
ಜೀವಿತಾತ್ಮರೊಳವನೆ ನರಪುಂಗವನು ಕೇಳೆಂದ ॥ ೧೪ ॥

ಆವುದಿಪ್ಪುದದಿಪ್ಪುದಿಲ್ಲದು ।
ದಾವುದದು ಮತ್ತಿಲ್ಲವದರಿಂ ।
ದಾವುದಿಹುದಿಲ್ಲೆಂಬರಿವೆಸದ ಸದ್ವಿಚಾರವದು ॥
ಆವಿಚಾರದೊಳರಿದು ನೋಡಿದೊ ।
ಡೀವಿವಿಧತೋರ್ಕೆಗಳ ಮಾರಿಹು ।
ದಾವುದಿನ್ನದು ನಿತ್ಯತೋರ್ಪುದನಿತ್ಯವೆನಿಸುವುದು ॥ ೧೫ ॥

ಅರಿದರಿಂತರಿವರು ಚರಾಚರ ।
ಭರಿತನವ್ಯಯನಾತ್ಮನೆಂದೇ ।
ಹರಿಸಲಪ್ಪುದೆ ಸಾವನಲ್ಲವನಾವಕಾಲದಲಿ ॥
ಪರಿಪರಿಯೊಳಿಹ ನಾಮರೂಪಿನ ।
ಪರಿಜುವಹ ದೇಹವಿದಶಾಶ್ವತ ।
ಮರುಗಬೇಡದರಿಂದ ಮೆಯ್ಯಳಿವಿಂಗೆ ಧುರವೆಸಗು ॥ ೧೬ ॥

ಕೊಂದೆನಾತನ ಸತ್ತನವನಿಂ ।
ತೆಂದು ಬಗೆಗೊಂಬೋರ್ವನೆನ್ನನು ।
ಕೊಂದೊಡಾಗಳೆ ಸತ್ತೆನಾನಿಂತೆಂದು ಬಗೆವೋರ್ವ ॥
ಮಂದಬುದ್ಧಿಗಳವರು ನಿಜದಲಿ ।
ನಿಂದವರು ತಾವಲ್ಲ ಕೊಲ್ಲಿಸಿ ।
ಕೊಂದು ಕೊಲುವವನಲ್ಲ ನಿಶ್ಚಲನಾತ್ಮ ನೋಡೆಂದ ॥ ೧೭ ॥

ಹುಟ್ಟುಸಾವುಗಳಿಲ್ಲದಾತನೆ ।
ಹುಟ್ಟಿದಂದದಿ ತೋರಿ ಪುನರಪಿ ।
ಹುಟ್ಟನೆಂದೇನಿಲ್ಲ ಶಾಶ್ವತನಾತನವ್ಯಯನು ॥
ಬಟ್ಟೆಹಳತದು ಹರಿದೊಡನೆ ಹೊಸ ।
ಬಟ್ಟೆಯುಡುವೊಲು ಜೀರ್ಣದೇಹವ ।
ಬಿಟ್ಟು ಪೊಸತನು ಪಿಡಿವನವನನು ಕೊಲುವರಿಲ್ಲೆಂದ ॥ ೧೮ ॥

ಸುಡುವೊಡಾರದು ಕಿಚ್ಚುತೋಯಿಸಿ ।
ಬಿಡುವೊಡಾರದು ನೀರು ಕರವಾ ।
ಳ್ಕಡಿವೊಡಿನ್ನಂತಾರದಾರದು ಗಾಳಿಯೊಣಗಿಸಲು ॥
ಸುಡದ ಕಂಕಡಿವಡೆಯದೊಣಗದ ।
ಜಡದ ಜಾಡ್ಯಕೆ ಸಲ್ಲದಾತ್ಮನು ।
ಮಿಡುಕದಚಲನು ಸರ್ವಗನುನಿತ್ಯನು ಚಿರಂತನನು ॥ ೧೯ ॥

ಸೂಕ್ತವಲ್ಲೀ ದುಃಖವಿದರಿಂ।
ಮುಕ್ತನಾಗೆಲೆ ಪಾರ್ಥ ನೋಡ।
ವ್ಯಕ್ತನಾತ್ಮನು ನಿರ್ವಿಕಾರನಚಿಂತ್ಯನವ್ಯಯನು ॥
ವ್ಯಕ್ತನವನಿನ್ನೆಂದು ತಿಳಿವುದೆ।
ಯುಕ್ತವೆಂದಾಡುವೊಡೆ ನೀಂ ಪುನ।
ರುಕ್ತಿಯೇತಕೆ ಸಹಜವೈಸಲೆ ಸತ್ತು ಹುಟ್ಟುವುದು ॥ ೨೦ ॥

ಹುಟ್ಟಿದೊಡೆ ಸಾಯುವುದು ಸತ್ತೊಡೆ।
ಹುಟ್ಟುವುದು ಬಿಡದವನನೆಂದೊಡೆ।
ಕಟ್ಟಕಡೆಬುಡವಿರದ ಪರಿಹರಿಸುವೊಡೆ ತೀರದುವ।
ಕಟ್ಟಿಕೊಂಡಳಲೇಕೆ ಶೋಕವ।
ಬಿಟ್ಟುಕಳೆ ಪಗಲಿರುಳುನಡೆವೀ।
ಕಟ್ಟಳೆಯ ಕಂಡೇಕೆ ಮರುಗುವೆ ಪಾರ್ಥಹೇಳೆಂಪ ॥ ೨೧ ॥

ಭಾರತನೆ ಕೇಳಿನ್ನು ಮೊದಲಿಗೆ।
ತೋರದವ್ಯಕ್ತದಲಿ ಮಧ್ಯದಿ।
ತೋರಿ ಬೇರಿಂತಾಗಿ ಭೂತವಿಕಾರವಿದುಕಡೆಗೆ ॥
ತೋರದಡಗುವುದಿದಕೆ ನೀಂ ಕ।
ಣ್ಣೀರಿಡುವುದನುಚಿತವು ನೋಡವಿ।
ಕಾರಿಯಾಗಿಹುದಾತ್ಮವದು ಶಾಶ್ವತವು ನಿಶ್ಚಲವು ॥ ೨೨ ॥

ಅದನೆ ನೋಡುವರಚ್ಚರಿಯವೆಂ।
ದದನೆ ಕೇಳುವರಚ್ಚರಿಯವೆಂ।
ದದನೆ ಪೇಳುವರತ್ಯಪೂರ್ವಾಶ್ಚರ್ಯಕರವೆಂದು ॥
ವಿಧವಿಧದ ಬಣ್ಣನೆಗಳಿಂತೀ।
ವಿಧದ ತಿಳಿವುಗಳಲ್ಲದೆಂತೆಂ।
ದದನು ತಿಳಿದವರಿಲ್ಲ ಬರಿಬಾಯ್ಬಡಿಕರವರೊಳಗೆ ॥ ೨೩ ॥

ದೇಹಿಯೆಂದೆನಲಾತ್ಮನಾತನು ।
ದೇಹದಳಿವಿನೊಳಳಿಯುವೀ ।
ಸಂದೇಹ ಬೇಡವನಳಿಯದಾತನವಧ್ಯನನುಪಮನು ॥
ಊಹಿಸಲು ಸಲದನಿತುದೇಹ ಸ ।
ಮೂಹಗಳ ಕೂಡಿರುವನೊಬ್ಬನೆ ।
ದೇಹಿಯುವನದರಿಂದ ದುಃಖಿಪುದುಚಿತವಲ್ಲೆಂದ ॥ ೨೪ ॥

ಇನ್ನುನೀನೇ ನೋಡು ಯೋಚಿಸಿ ।
ನಿನ್ನ ಕುಲಧರ್ಮವನು ಬಿಡದೊಡೆ ।
ತನ್ನರೆನ್ನರು ಬಂಧುಬಾಂಧವರಿವರು ಬಳಗವಿದು ॥
ಎನ್ನದಾರಾಗಿರಲಿ ಸಮರಕೆ ।
ಸನ್ನಿಹಿತರಾದವರಸಿದರಿಸು ।
ವುನ್ನತಿಯೆ ಮಿಗಿಲಾದ ಶ್ರೇಯೋತ್ಕರದ ಪಥವೈಸೆ ॥ ೨೫ ॥

ಹಲವುಮಾತಿನ್ನೇಕೆ ಕ್ಷತ್ರಿಯ ।
ಕುಲಜರಿಗೆ ಕೃತಪುಣ್ಯಕಾರ್ಯದ ।
ಫಲದಿನಲ್ಲದೆ ಲಭಿಸದೀಪರಿ ಯುದ್ಧವೆಲ್ಲರಿಗೆ ॥
ಫಲುಗುಣನೆ ಭಾಗ್ಯಾಧಿಕನು ನೀಂ ।
ನಿಲು ವಿಮುಖನಾಗದಿರು ಸ್ವರ್ಗದ ।
ಬಲಿದ ಬಾಗಿಲತೆರಹು ಸಂತಸದುಲುಹು ಸಂಗ್ರಾಮ ॥ ೨೬ ॥

ಕೂಡಿಬಂದೀಸಮಯದಲಿ ಹೊ ।
ಯ್ದಾಡದಿದ್ದರೆ ವಂಶಧರ್ಮದ ।
ಪಾಡಳಿದ ಪಾತಕವಪಖ್ಯಾತಿಗಳು ಹೊದ್ದುವುವು ॥
ನೋಡಿನಿನ್ನಪಯಶವನೇ ಕೊಂ ।
ಡಾಡುವರು ಸಂಭಾವಿತಗೆ ಜನ ।
ರಾಡುವಪಯಶ ನುಡಿಯನಡೆಯಿಂ ಸಾವುಲೇಸಲ್ತೆ ॥ ೨೭ ॥

ಗಂಡುಗಲಿ ನೀನ್ನೈಸೆ ನಿನ್ನನು ।
ಕಂಡು ನೆರೆದವರೆಲ್ಲ ನಗುವರು ।
ಷಂಡನೆಂಬರು ಕೂಡಿದೀರಥಿಕರ್ಕಳದರಿಂದ ॥
ಕೊಂಡು ಧನುವನು ಸೆಣಸು ಜೈಸಲ ।
ಖಂಡ ಸೌಖ್ಯವನಿಲ್ಲಿ ಸತ್ತೊಡ ।
ಖಂಡ ಸೌಖ್ಯವನಲ್ಲಿ ವಿಬುಧಾಲಯದೊಳನುಭವಿಸು ॥ ೨೮ ॥

ಇದನೆ ನಿಶ್ಚಯಗೆಯ್ದು ಸುಖದುಃ ।
ಖದಲಿ ಲಾಭಾಲಾಭದಲಿ ಬಂ ।
ದೊದಗಿತೋರ್ಪ ಜಯಾಪಜಯದಲಿ ಸಮತೆಯನುಬಗೆಗೆ ॥
ಪುದುಗೊಳಿಸು ಧನುಶರಗಳನು ಪಿಡಿ ।
ಕದನಗಲಿಯಾಗೇಳು ರಿಪುಗಳ ।
ಸದೆದು ಕಳಿ ಕೊಲೆಪಾತಕಗಳಿಡೆಗೊಳ್ಳವೆಳ್ಳನಿತು ॥ ೨೯ ॥

ಭಾಗವತಜನ ಮಣಿಯೆ ಸಾಂಖ್ಯ ಸು ।
ಯೋಗವನು ನಿನಗಾಗಿ ಪೇಳಿದೆ ।
ನೀಗ ಪೇಳುವೆ ಕರ್ಮಯೋಗವನಿನ್ನು ತಿಳಿವಂತೆ ॥
ಹೋಗಿ ನೀನಾಮಾರ್ಗದಲಿ ಸುಖಿ ।
ಯಾಗು ತಪ್ಪದೆ ಕರ್ಮಬಂಧವ ।
ನೀಗಿ ನಿರ್ಮಲಚಿತ್ತನಾಗೆಲೆ ಪಾರ್ಥನೀನೆಂದ ॥ ೩೦ ॥

ಪಿಡಿಯದೇ ಹೆದ್ದಾರಿಯನು ಮುಂ ।
ನಡಿಯಿಡಳುಕದೆ ವೈರಿಗಳ ನೆಲೆ ।
ಗೆಡೆಯಿರದು ಸಿರ್ಧೀತಿನಿಷ್ಕಂಟಕಗಳದರೊಳಗೆ ॥
ಎಡಹುವಂಜಿಕೆಯಿಲ್ಲ ಬಗೆಗೊಡ ।
ಬಡುವನಿತೆನಡೆ ಸಾಕು ಮಿಕ್ಕಿನ ।
ಗೊಡವೆಬೇಡದು ವಿಫಲವಾಗದು ಪಾರ್ಥಕೇಳೆಂದ ॥ ೩೧ ॥

ಕುರುಕುಲಜ ಕೇಳ್ಕರ್ಮಯೋಗಾ |
ಚರಣವನು ತಿರಗೊಳಿಸಲದಕೊ |
ಪ್ಪಿರುವ ವ್ಯವಸಾಯಾತ್ಮಿಕಾ ಮತಿಯೊಂದೆ ಸಾಧನವು ||
ಅರಿದು ಕಾರ್ಯಾಕಾರ್ಯವನು ನಿ |
ರ್ಧರಿಪುದದು ಬಹುಶಾಖೆಯಿಂದೊ |
ಪ್ಪಿರುವುದವ್ಯವಸಾಯಿಕಾಮತಿಯದಕಯೋಗ್ಯವದು || ೩೨ ||

ಆ ಮತಿಯೆ ಪರಲೋಕವಿಭವೋ |
ದ್ದಾಮತಿಯ ಬಣ್ಣಿಸುವ ವೇದ |
ಸ್ತೋಮವಾಕ್ಯಾವಳಿಯನಾ ಸಾಧನವನಾ ಸುಖವ ||
ಪ್ರೇಮದಿಂ ಚಿಂತಿಸುವುದಂತಿಹ |
ಕಾಮನೆಯ ವೈದಿಕರ ಸುಮಸಮ |
ಕೋಮಲತರ ಸುಭಾಷಿತವನದನೊರೆವೆ ಕೇಳೆಂದ || ೩೩ ||

ವೇದ ವಚನವೆ ವಚನವವುಗಳ |
ಬೋಧನೆಯೆ ಸದ್ಬೋಧೆ ಲೋಕದಿ |
ವೇದ ಧರ್ಮವೆ ಧರ್ಮ ವೈದಿಕಪಂಥವೇ ಪಂಥ ||
ವೇದದಂತಿನ್ನಿಲ್ಲ ಬೇರೊಂ |
ದೋದು ಹೆಚ್ಚಿನದೆಂದು ಸರಸದಿ |
ವಾದಿಸುವರಾ ವೇದವಾದಿಗಳೆನಿಪ ವೈದಿಕರು || ೩೪ ||

ಸಕಲವಿಧದಲಿ ಸ್ವರ್ಗಸುಖ ಸಾ |
ಧಕನು ನೀನಾಗೆಂಬ ವೇದ |
ಪ್ರಕರವೆಲ್ಲವು ಸತ್ವ ರಜ ತಮವೆಂಬ ತ್ರಿಗುಣಗಳ ||
ನಿಕರದಿಂದೆಡೆಗೊಂಡವವುಗಳ |
ಸುಖವೆನಲ್ಕತ್ಯಲ್ಪವದರಿಂ |
ಸುಕರವಹ ನಿರ್ದ್ವಂದ್ವ ನಿರ್ಗುಣ ಪದವನಾಶ್ರಯಿಸು || ೩೫ ||

ತುಂಬಿ ಸುತ್ತಲು ತುಳುಕಿ ಹರಿವ ಮ।
ಲಾಂಬುಶರನಿಧಿಯಂತಿರಲು ನೀ।
ಗೊಂಬೊಡರಸುವನೇಕೆ ಚಿಲುಮೆಯನಾತ್ಮನಿಷ್ಠೆಯಲಿ ॥
ತುಂಬಿದಮಲಜ್ಞಾನನಿಧಿ ಕೆ।
ಯ್ಗೊಂಬನೇತಕೆ ಕಾಮ್ಯಕರ್ಮಕ।
ದಂಬವನು ವೇದೋಕ್ತವೆಂದಾಫಲಕೆ ಮರುಳಾಗಿ ॥ ೩೬ ॥

ಮಾಡೆನೆಂದೆನಬೇಡ ಕರ್ಮವ।
ಮಾಡು ಫಲವನಪೇಕ್ಷಿಸದೆ ನೀಂ।
ಮಾಡಿ ಫಲದಾಸೆಯನು ಕರ್ಮದಿವಾಳ್ಪೆನೆನಬೇಡ ॥
ನೋಡು ನಿನ್ನಧಿಕಾರವೆಲ್ಲವು।
ಮಾಡುವುದರೊಳಗಿಪ್ಪುದಲ್ಲದೆ।
ಮಾಡಿದೊಡೆ ನಡೆದಪುದೆ ನಿನ್ನಧಿಕಾರಫಲದೊಳಗೆ ॥ ೩೭ ॥

ಆಗುಹೋಗುಗಳೆರಡನುಂ ಸಮ।
ನಾಗಿ ತಿಳಿದಾಚರಿಸು ಕರ್ಮವ।
ಯೋಗವೆನಲಿದು ಸಿಧ್ಯಸಿಧ್ಧಿಗೆ ಬವಣಿಗೊಳ್ಳದಿರು ॥
ರಾಗಿಯಾಗದೆ ವಾಸನಾ ಸುಖ।
ಭೋಗದಲಿ ನಿಸ್ಸಂಗನೆನಿಸಿ ವಿ।
ರಾಗಿಯಾಗರ್ಜುನನೆ ನಿರ್ಮಲ ಬುದ್ಧಿಯೋಗದಲಿ ॥ ೩೮ ॥

ಕಿರಿದು ಕೀಳ್ಮೇಲೊಳಿತು ಕೆಟ್ಟುದು।
ಹಿರಿದು ಹೆಚ್ಚಿನದೆಂದು ನಾನಾ।
ಪರಿಯ ಕರ್ಮಂಗಳ ಫಲಾಫಲ ಲಾಭನಷ್ಟಗಳ ॥
ಪರಿಯನರಿದಾಚರಿಸುವರು ಕೃಪ।
ಣರು ಫಲಾಫಲಗಳನು ನೀನಾ।
ಪರಿಯೊಳೆಣಿಸದೆ ಶುದ್ಧಬುದ್ಧಿಯ ಪದಕೆ ಶರಣಾಗು ॥ ೩೯ ॥

ಕರ್ಮಯೋಗವೆನಲ್ಕೆ ಮಾಡುವ ।
ಕರ್ಮಗಳಿನೊದಗುವ ಫಲಂಗಳ ।
ನೊರ್ಮೆಯಾದರು ಮನದೊಳಗೆ ಚಿಂತಿಸದೆ ಕೌಶಲದಿ ॥
ಕರ್ಮವನು ಮಾಡುತ್ತ ನಡೆವೀ ।
ಮರ್ಮವೆಂದರಿ ಸಾಮ್ಯ ಬುದ್ಧಿಯು ।
ನಿರ್ಮಲತ್ವವೆ ಮುಖ್ಯವದರೊಳು ಪಾರ್ಥ ಕೇಳೆಂದ ॥ ೪೦ ॥

ಇದು ಶುಭಪ್ರದವಿಂತಿದಶುಭ ।
ಪ್ರದವೆನಲ್ಕಿಹ ಪುಣ್ಯಪಾಪದ ।
ಪದವಿಸ್ವರ್ನರಕಗಳು ತಪ್ಪವು ಫಲಗಳಂತವಕೆ ॥
ಒದಗಿ ಬಹುದೆಂತೆಂತು ಮತ್ತಂ ।
ತದನುಪಾಯದಿ ನಿರ್ವಹಿಸು ಕ ।
ರ್ಮದ ಮಹತ್ವದೊಳಿಲ್ಲ ಹುರುಳೆಂಬುದನು ನೋಡೆಂದ ॥ ೪೧ ॥

ಬುದ್ಧಿಯನು ಸಮಗೊಳಿಸು ನಿರ್ಮಲ ।
ಬುದ್ಧಿಯೊಂದೇ ಕರ್ಮಯೋಗ ಸ ।
ಮುದ್ಧರಣ ಸತ್ವಸ್ಥವಿಂತೆಂಬುದನು ನಿಶ್ಚಯಿಸು ॥
ಹೊದ್ದಿಡಿದ ಕರ್ಮದೆಲಿ ಶುದ್ಧಾ ।
ಶುದ್ಧತೆಯ ನರಸದಿರು ಚಂಚಲ ।
ಬುದ್ಧಿಗಳವೊಲು ಬದ್ಧನೆನದಿರು ಪಾಪಪುಣ್ಯದೊಳು ॥ ೪೨ ॥

ಫಲುಗುಣನೆ ಕೇಳಿಂತು ಕರ್ಮದೊ ।
ಳಲಸೆರೆನಿಸದಮತಿಯುತರು ನಿ ।
ರ್ಮಲರು ಸುಜ್ಞಾನಿಗಳು ಬಂಧವಿಮುಕ್ತರೆಂದೆನಿಸಿ ॥
ಸಲುವರನು ಸಮಪದಕದಕೆ ಸಂ ।
ಚಲನ ಬುದ್ಧಿಯ ಕೋಟೆಯನು ದಾಂ ।
ಟೊಲಿದು ಕೇಳುವ ತಿಳಿವಹಂಗಾಮೇಲೆ ನಿನಗಿರದು ॥ ೪೩ ॥

ಶ್ರುತಿವಚನ ಶ್ರುತಿವಚನ ವೆಂಬೀ ।
ಮತದ ಮರುಳಿನ ನಿನ್ನ ಚಂಚಲ ।
ಮತಿ ಸಮಾಧಿ ಸ್ಥಿತಿಗೆ ಸಂದರೆ ಸಾಕು ನಿಜಪಥವ ॥
ಗತಿಯೊಳೀ ಮುಂದೈದಿ ಸೌಖ್ಯೋ ।
ನ್ನತಿಯ ಕಂಡಪೆ ಪಾರ್ಥನೀನಾ ।
ಸ್ಥಿತಿಗೆ ಸಲುವುದಕಿಪ್ಪುದೆಲ್ಲವನರಿತು ಮಾಡೆಂದ ॥ ೪೪ ॥

ಉತ್ತಮ ಶ್ಲೋಕನೆ ಸಮಾಧಿ ।
ಸ್ಥ ಸ್ಥಿತಪ್ರಜ್ಞಂಗೆ ಭಾಷಾ ।
ವೃತ್ತಿಗಳದೆಂತಾತನೆತಂತಾರನೆಂದಪುದು ॥
ಬಿತ್ತರಿಸು ನಡೆನುಡಿಗಳೆಂತವ ।
ನೆತ್ತಕುಳ್ಳಿರುವನು ಮಹಾಮಹಿ ।
ಮೋತ್ತಮನೆ ಹೇಳೆಂದು ಬಿನ್ನಯಿಸಿದನು ವಿನಯವಲಿ ॥ ೪೫ ॥

ಕುರುಕುಲೋತ್ತಮ ಕೇಳು ನಾನಾ ।
ಪರಿಯ ಬುದ್ಧಿಯ ವಾಸನೆಯಪರಿ ।
ಹರಿಸಿ ಸುಖದುಃಖದಲಿ ಹರ್ಷವಿಷಾದವನು ತೊರೆದು ॥
ಅರಿದು ತನ್ನೊಳು ತಾನೆ ಸಂತಸ ।
ವೆರೆದು ನಿಂದವನಾತನೇ ಮುನಿ ।
ವರನವನೆ ಸುಜ್ಞಾನನಿಧಿಯವನೇ ಸ್ಥಿತಪ್ರಜ್ಞ ॥ ೪೬ ॥

ಹೆರಿಯಗೊಡದಿಂದ್ರಿಯವ ಕಮಠನ ।
ಪರಿಯೊಳೊಳಗೊಂಡಾತ್ಮನಲಿ ಮನ ।
ವಿರಿಸಿ ವಿಷಯಾದಿಗಳ ಸಂಗ ವಿದೂರನೆಂದೆನಿಸಿ ॥
ಹರಿಸಿ ಕಾಮಕ್ರೋಧ ಭಯವೆಂ ।
ಬರಿಗಳನು ಸಂತಸದೊಳಿಹ ನರ ।
ವರನವನೆ ಸುಜ್ಞಾನನಿಧಿಯವನೇ ಸ್ಥಿತ ಪ್ರಜ್ಞ ॥ ೪೭ ॥

ಆಸೆಯನು ಬಿಡಪುಂಬುದರೊಳುಪ ।
ವಾಸವನು ಕೆಯ್ಗೊಂಡೊಡದು ಪರಿ ।
ಹಾಸಕೆಡೆಯಪ್ಪಂತೆ ಸರ್ವೇಂದ್ರಿಯವ ಬಿಗಿವಿಡಿದು ॥
ವಾಸನೆಯ ಬಿಡಲರಿಯದವ ಗುಪ ।
ಹಾಸಕೆಡೆಯಾನಿಷ್ಠೆ ಮುಕ್ತಿವಿ ।
ಲಾಸಿನಿಯ ಸುಖದಿಚ್ಛೆ ಕನಸೆಂಬುದನು ತಿಳಿಯೆಂದ ॥ ೪೮ ॥

ಅಲುಗಗೊಡೆವಿಂದ್ರಿಯವನೆಂಬೀ ।
ಛಲದೊಳಭ್ಯಾಸಿಸುವ ಸಾತ್ವಿಕ ।
ಬಲರಮನವನು ಕೆದರಿ ಕೆಡಿಸುವವವು ಬಲೋತ್ಕರದಿ ॥
ಸುಲಭವಲ್ಲದರಿಂದಲಿಂದ್ರಿಯ ।
ದೊಲವನೆನ್ನೊಳು ಮೆಲ್ಲಮೆಲ್ಲನೆ ।
ನಿಲಿಸಿ ಮಿಗೆಯೋಗಾತ್ಮನಪ್ಪುದು ಬುದ್ಧಿಯೋಗವಲಿ ॥ ೪೯ ॥

ನೆನೆದೊಡನೆ ವಿಷಯವನು ಸಂಗದ ।
ನೆನಹು ಸಂಜನಿಸುವುದು ಸಂಗದ ।
ನೆಸಹಿನಿಂ ಸಂಜನಿಸುವುವು ಕಾಮನೆಗಳವುಗಳೊಳು ।
ನೆನಹು ಪಿರಿದಾದಂತವುಗಳಿಂ ।
ಜನಿಸುವುದು ಕಡುಗೋಪವದರಿಂ ।
ಮನುಜನಹ ಸವಿವೇಕಿಯಂತವಿವೇಕವೆಡೆಗೊಳಲು ॥ ೫೦ ॥

ಸ್ಮರಣವಳಿವುದು ನೋಡಲಾ ಸಂ ।
ಸ್ಮರಣವಳಿದೊಡೆ ಬುದ್ಧಿಗೆಡುವುದು ।
ಪುರುಷನಿಂತಾಬುದ್ಧಿಯಳಿವಿಂದಳಿವನೆಲ್ಲವನು ॥
ನರನೆ ನೀನೋಡಿಂತು ವಿಷಯದೊ ।
ಳಿರಗುವಿಂದ್ರಿಯಗಳಿಗೆ ಬೆಂಬಲ ।
ದೊರೆಯಲವು ಬಲುಹಾಂತು ನಿಲುವವು ಕೆಡಿಸಿ ।
ಜೀವಿತವ ॥ ೫೧ ॥

ಎರಡುವಾದ್ಯಂಗಳನು ಬಾಯೊಳ |
ಗಿರಿಸಿ ಶ್ರುತಿಗೊಡಲೆಂದನೇಳುಂ |
ಸರದಿ ಪಾಡುವೊಡೊಂದನಿಂತಭ್ಯಾಸಗೊಂಡಂತೆ ||
ಇರಿಸಿ ಪರಮಾತ್ಮನಲಿ ಮನವನು |
ಚರಿಸುವಿಂದ್ರಿಯಗಳನು ವಿಷಯಾಂ |
ತರದಿ ವಿಹರಿಸಿ ಮಾಳ್ಪದನುಮಾಡಲ್ಕೆ ಕಲ್ದಪುದು || ೫೨ ||

ಪ್ರೀತಿಯಪ್ರೀತಿಗಳಿವೆಂಬೀ |
ಮಾತನೆನ್ನದೆ ಮಾಳ್ಪನೊಂದೇ |
ರೀತಿಯಿಂದವನಾವ ನಿಷ್ಟಾನಿಷ್ಟ ಕರ್ಮವನು ||
ಆತನೇ ನಿಜಯೋಗಯುಕ್ತನು |
ನೀತಿವಿದನೀಲೋಕಮಾನ್ಯನು |
ಭೀತಿಯಳಿದ ಸುಖಸ್ಥನಾತನೆ ಪಾರ್ಥಕೇಳೆಂದ || ೫೩ ||

ಎತ್ತಲಿಪ್ಪು ದಯುಕ್ತನಾದವ |
ಗುತ್ತಮದ ಮತಿ ಯುತ್ತಮದ ಮತಿ |
ವೆತ್ತಿರದೊಡಿನ್ನೆತ್ತಲುತ್ತಮ ಭಾವನಾನಿವಹ ||
ಉತ್ತಮದ ಭಾವನೆಗಳಿರದೊಡೆ |
ಮತ್ತೆ ಶಾಂತಿಯದೆತ್ತ ಶಾಂತಿಯ |
ತುತ್ತತುದಿಗೇರದೊಡೆ ನಿಜಸುಖವೆತ್ತಹೇಳೆಂದ | || ೫೪ ||

ಅಡಿಗಡಿಗೆ ವಿಷಯಗಳ ಬೆಂಗಡೆ |
ನಡೆಯುವಿಂದ್ರಿಯದೊಡನೆ ಮನವನು
ನಡೆಯಗೊಟ್ಟೊಡೆ ಬುದ್ಧಿಯನು ಕೊಂಡೊಯ್ದು ನೆಲೆಗೆಡಿಸಿ ||
ಕೆಡಿಸದಿರದಾಮನವು ನೆಟ್ಟನೆ |
ನಡೆವ ಹಡಗನು ತಡೆದು ಗರ್ರನೆ |
ಬಡಿದುತಿರುಗಿಸಿ ಮುಳುಗಿಸುವ ಸುಳಿಗಾಳಿಯಂದದಲಿ || ೫೫ ||

ಲೆಕ್ಕವಿರದನಿತಪ್ಪ ಹೊಳೆಗಳೊ ।
ಳುಕ್ಕಿ ಹರಿದೈತಂದ ನೀರಿಂ ।
ಮಿಕ್ಕಿ ಮೇರೆಯಮೀರದಂಬುಧಿ ಹೆಚ್ಚುಕುಂದೆಂಬ ॥
ಲೆಕ್ಕಕೆಡೆಗುಡದಿಪ್ಪವೊಲು ಮುಂ ।
ದುಕ್ಕಿಬಹ ವಿಷಯಾದಿಸುಖಗಳ ।
ಲೆಕ್ಕಿಸದೆ ನಿಲುವವನೆ ಶಾಂತಿಯ ಪಡೆದು ಸುಖಿಸುವನು ॥ ೫೬ ॥

ಎನಿತು ಕರ್ಮಗಳೆಡೆಗೊಳುವುವಂ ।
ತನಿತು ಕರ್ಮಂಗಳನು ನಿರ್ಮಮ ।
ನೆನಿಸಿ ನಿಸ್ಪೃಹನಾಗಿ ನಿರಹಂಕಾರದಿಂದೆಸಗಿ ॥
ಮನದಿ ಸಂಕಲ್ಪವನು ಹಿಡಿಯದ ।
ಮನುಜನೇ ಶಾಂತಿಯನು ಪಡೆಯುವ ।
ನನುಭವಿಸುವನು ನಿತ್ಯಸುಖವನು ಪಾರ್ಥಕೇಳೆಂದ ॥ ೫೭ ॥

ಇದನೆ ಬ್ರಾಂಹ್ಮೀ ಸ್ಥಿತಿಯೆನುವರಿಂ ।
ತಿದನು ಪಡೆದವರಂತಕಾಲದೊ ।
ಳೊದೆದು ಭವಬಂಧನವ ನಿಲುವರು ಬ್ರಹ್ಮಪದದೊಳಗೆ ॥
ವಿಧುಕುಲಜ ಕೇಳೆಂದು ಸೌಖ್ಯ ।
ಪ್ರದನೆನಿಪ ಮಂಗಲ ಮಹಾಶ್ರೀ ।
ಸುದತಿಯಾಣ್ಮ ಸುರೇಶವಂದಿತ ನೊಲಿದು ಬೋಧಿಸಿದ ॥ ೫೮ ॥



## ೩ನೆಯ ಸಂಧಿ

ಸೂ || ನಂದ ನಂದನ ನಾಪ್ತ ಜನತಾ |
ಬಂಧು ಭವತಾಪಾಪಹರನಾ |
ನಂದದಿಂದರುಹಿದನು ಪಾರ್ಥಗೆ ಕರ್ಮಯೋಗವನು ||

ಕಮಲಲೋಚನ ಕರ್ಮದಿಂ ಮತಿ |
ಸಮತೆಯೇಮಿಗಿಲೆಂಬೊಡಿನ್ನೆನ |
ಗಮಮಕೈವರ್ತಿಸುವದೇಕೀ ಘೋರ ಕರ್ಮವನು ||
ದ್ವಿಮುಖವಹ ಮಿಶ್ರಿತದನುಡಿಯಿಂ |
ಭ್ರಮೆಯನಾಂತೆನು ನಿಶ್ಚಯಾನು |
ಕ್ರಮದೊಳೊಂದನೆ ಬೆಸಸು ಶ್ರೇಯೋತ್ಕರವನಿಂತೆಂದು || ೧ ||

ನರನೆ ಕರ್ಮಜ್ಞಾನಗಳಿವೆಂ |
ಬೆರಡುನಿಷ್ಠೆಗಳಹವು ಲೋಕದೊ |
ಳರುಹಿದೆನುನಾನವುಗಳನು ಮುಂದಾಗಿ ತಿಳಿವಂತೆ ||
ಎರಡರೊಳಗಾ ಕರ್ಮನಿಷ್ಠಾ |
ಪರರೆ ಯೋಗಿಗಳೆನಿಸುವರು ಸ |
ಚ್ಚರಿತರಹ ಸುಜ್ಞಾನನಿಷ್ಠರೆ ಸಾಂಖ್ಯರೆನಿಸುವರು || ೨ ||

ಕರ್ಮವನು ಕೈಗೊಳ್ಳದಿರೆ ನೈ |
ಷ್ಕರ್ಮ್ಯವೆಂದೆನ್ನಿಸದು ಮಾಡುವ |
ಕರ್ಮವನು ಬಿಟ್ಟಿರ್ದಮಾತ್ರಕೆ ಸಿದ್ಧಿಕೆಯ್ಗೂಡದು ||
ಕರ್ಮವನು ಬಿಟ್ಟರೆನಿಮಿಷವಿರ |
ಲೊರ್ಮೆಗಾವದು ಸಾಧ್ಯವಾಗದು |
ಕರ್ಮವನುತಾನಾಗಿ ಪ್ರಕೃತಿಯೆ ಮಾಡಿಸದೆ ಬಿಡದು || ೩ ||

ಕಟ್ಟಿಕರ್ಮೇಂದ್ರಿಯಗಳನು ಬಗೆ ।
ಗೆಟ್ಟವಿಷಯ ಸುಖಾದಿಗಳಿಗೆಡೆ ।
ಗೊಟ್ಟು ಚಿಂತಿಸುವವರು ಮಿಥ್ಯಾಚಾರಿಗಳು ನೆಲದಿ ॥
ಹುಟ್ಟುಕುರುಡರು ಡಾಂಭಿಕರು ಮತಿ ।
ಗೆಟ್ಟಮೂಢರವಾನ್ಯರವರನು ।
ಬಿಟ್ಟುಬಿಡುವುದೆ ಲೇಸು ತತ್ವಜ್ಞಾನಲಾಲಸರು ॥ ೪ ॥

ಹಿಡಿದುಮನವನು ನಿಲಿಸಿ ವಿಷಯದ ।
ಗೊಡವೆಯಲಿ ಸುಳಿದಾಡದಂದದಿ ।
ಬಿಡದೆ ಕರ್ಮದ ಹೊರೆಯನಾಕರ್ಮೇಂದ್ರಿಯದಿ ಹೊರಿಸಿ ॥
ನಡಸುವವನುತ್ತಮನಹುದರಿಂ ।
ಕಡೆಗಣಿಸಿ ಕೈಗೊಂಡ ಕಾರ್ಯವ ।
ಕೆಡಿಸಲಾಗದು ಮಾಡು ನಿನ್ನಯ ನಿಯತ ಕರ್ಮವನು ॥ ೫ ॥

ಮಾಡದಿರುವುದರಿಂದ ಕರ್ಮವ ।
ಮಾಡುವುದೆ ಮಿಗಿಲಾದುದದರಿಂ ।
ಮಾಡು ನಿನ್ನಯ ನಿಯತಕರ್ಮವ ನಿರ್ಮಮತ್ವದಲಿ ॥
ಮಾಡೆನೆಂದೊಡೆ ಬರಿದೆ ಹೊಟ್ಟೆಯ ।
ನೋಡಿಕೊಡುವವರುಂಟೆ ಕರ್ಮವ ।
ದೂಡಿಬಿಟ್ಟರೆ ದೇಹಯಾತ್ರಾಚರಿತವೆಂತಹುದು ॥ ೬ ॥

ನೋಡಿ ಬ್ರಹ್ಮಾರ್ಪಣವೆನುವ ಮತಿ ।
ಗೂಡಿಮಾಡದೆ ಮಾಳ್ಪ ಕರ್ಮದ ।
ಗೂಡಿನಲಿ ತಾವಾಗಿ ಬಂಧಿತರಹರು ಬಹುಜನರು ॥
ಮಾಡದಾ ಪರಿಯಿಂದನೀನೇ ।
ಮಾಡಲಿಹಕರ್ಮಗಳನಸಿತನು ।
ಮಾಡುಬ್ರಹ್ಮಾರ್ಪಣವೆನುವ ನಿಶ್ಚಯವ ಬಿಡಗೊಡದೆ ॥ ೭ ॥

ಸೃಷ್ಟಿಸುತಯಜ್ಞಗಳನಾ ಪರ ।
ಮೇಷ್ಟಿಪೂರ್ವದಿ ಪ್ರಜೆಗಳನು ತಾಂ ।
ಸೃಷ್ಟಿಸುತ ಕರದೆಂದನವರೊಳು ನಿಮ್ಮಹಿತಕೆಂದು ॥
ಹುಟ್ಟಿಸಿದೆ ಯಜ್ಞವನುನೀವ್ ನಿ ।
ಮ್ಮಿಷ್ಟವನು ಪೂರಯಿಸಿ ಸಲೆ ಸಂ ।
ತುಷ್ಟಿಗೊಳಿಸುವ ಕಲ್ಪತರುವಾದಿದನು ಸಲಹುವದು ॥ ೮ ॥

ನಡಸಿ ನೀವೀಸಕಲ ಯಜ್ಞವ ।
ನೆಡೆವಿಡದೆ ದಿವಿಜರನು ಸಂತಸ ।
ವಡಿಸಿ ಸಂಭಾವಿಸುವಿರಾದೊಡೆ ನಿಮ್ಮನಾಸುರರು ॥
ಕಡುಹೆರುಷವಪ್ಪಂತೆ ಸಂತಸ ।
ವಡಿಸಿ ಸಂಭಾವಿಸುವರಿಂತಿ ।
ಕ್ಕಡೆಯ ಸುಖಸಾಧನವನಿದನಾಚರಿಸಿ ನೀವೆಂದ ॥ ೯ ॥

ಸುರರು ಯಜ್ಞಗಳಿಂದ ಸಂತಸ ।
ಭರಿತರಾಗೆ ಸಮಸ್ತ ಭೋಗೋ ।
ತ್ಕರಕೆ ಬೇಕಾದೀಪ್ಸಿತಂಗಳನೀವರಾಸುರರ ॥
ತಿರುಗಿ ಕೃತುಮುಖದಿಂದ ತೋಷಿಸ ।
ದಿರುವವನು ಕಡುಗಳ್ಳನಹನೆಂ ।
ದರಿದುತೋರ್ದೀಯಜ್ಞವೆಲ್ಲವನಡಸಿ ನೀವೆಂದ ॥ ೧೦ ॥

ತಣಿಸಿ ಯಜ್ಞಗಳಿಂದ ಸುಮನಸ
ಗಣವನಂತಾಯಜ್ಞಶೇಷವ ।
ನುಣುವವರು ನಿರ್ಧೂತಪಾತಕರಾಗಿ ಬಾಳುವರು ॥
ಎಣಿಸದವರನು ತಮ್ಮಹೊಟ್ಟೆಯ ।
ತಣಿಸುವಂದವನೊಂದನೇ ಕಂ ।
ಡುಣುವವರು ಪಾಪಗಳನುಂಬರು ಕೆಡಿಸಿ ಜೀವಿತವ ॥ ೧೧ ॥

ಅನ್ನದಿಂ ಪ್ರಾಣಿಗಳು ಹುಟ್ಟುವು ।
ವನ್ನವದು ಮಳೆಯಿಂದಲಪ್ಪುದು ।
ಜನ್ನದಿಂದಾ ಮಳೆಯು ಮತ್ತಾ ಜನ್ನಕರ್ಮಗಳ ॥
ಬೆನ್ನೊಳಿಹುದಾಕರ್ಮಗಳು ನೋ ।
ಡಿನ್ನು ಬಿದಿಯಿಂದಾದುವಾ ಬಿದಿ ।
ಮುನ್ನಪುಟ್ಟಿದನಕ್ಷರದೊಳಕ್ಷರವನಾರತವು ॥ ೧೨ ॥

ಯಾಗದೊಳಗದು ಸುಪ್ರತಿಷ್ಠಿತ ।
ವಾಗಿಹುದು ಲೋಕದಲಿ ಯಜ್ಞೋ
ದ್ಯೋಗಶೀಲರು ಸುಖಿಗಳದರಿಂ ಸರ್ವಕಾಲದಲಿ ॥
ಹೋಗದಾದಾರಿಯಲಿ ಯಜ್ಞವ ।
ನೀಗಿ ಶಿಶ್ನೋದರ ಪರಾಯಣ ।
ರಾಗಿ ಬಾಳುವ ಪಾಪಿಗಳ ಬಾಳುವೆಗಳವುವ್ಯರ್ಥ ॥ ೧೩ ॥

ಆತುಮನೊಳೇ ಸಂತಸಂಗೊಂ ।
ಡಾತುಮನೊಳೇ ತೃಪ್ತಿಯಂ ಬಡೆ ।
ದಾತುಮನ ನೆನಹೊಂದರಿಂದಲೆ ನಿಂದಮಾನವಗೆ ॥
ಭೂತಮಾತ್ರದೊಳರ್ಥ ಸಂಬಂ ।
ಧಾತುರತೆಯಳಿದವಗೆ ಕರ್ಮದ ।
ಮಾತು ಮತ್ತಿಲ್ಲಿಯದು ಮಾಡುವೊಡುಳಿದುದೇನಿಹುದು ॥ ೧೪ ॥

ಈ ಪರಿಯ ಸಜ್ಜನರು ಕರ್ಮವಿ ।
ಲೇಪನಕೆ ಮೆಯ್ಗುಡಲಿ ಮಾಣಲಿ ।
ಪಾಪಪುಣ್ಯದ ಬಂಧ ಬಾಧಿಸದವರನಿದು ಸಿದ್ಧ ॥
ಆಪವಣವಂತಿರಲಿ ನೀಂ ಕೈ ।
ಲಾಪುದನು ಮಾಡೆರಡೆಣಿಸದಿರು ।
ಲೇಪವಿಲ್ಲದಕರ್ಮಿಗಳಿಗಹುದಮರಪದವಿವಕೆ ॥ ೧೫ ॥

ಬಗೆಗೆಡದೆ ಸುಖದುಃಖವೆಂಬೀ ಬಗೆಯ
ಬಗೆಯದೆ ನಡೆದು ಜನಕಾ ।
ದಿಗಳು ಸಿದ್ಧಿಯಪಡೆದರನುಪಮ ಕರ್ಮಯೋಗದಲಿ ॥
ಹೆಗರಣವಿದೆಂದೆನದೆ ನೀನವ ।
ರುಗಳವೋಲಾಚರಿಸಿ ನಡೆ ಹಿಂ ।
ದೆಗೆಯಬೇಡದರಿಂದ ಮನವನು ಮಾಡು ಮಾಳ್ಪದನು ॥ ೧೬ ॥

ಬಲ್ಲಿದವರಾಚರಣೆಯನು ಕಂ ।
ಡೆಲ್ಲವನು ಕಲಿಯುವರು ಮಿಕ್ಕವ ।
ರೆಲ್ಲರದರಿಂ ಮಾಳ್ಪದಾ ಬಲ್ಲವರು ಮಾಳ್ಪದನು ॥
ಇಲ್ಲಿ ನೋಡರ್ಜುನನೆ ಮಾಡುವೊ ।
ಡಿಲ್ಲವೆನಗೀ ಮೂರು ಲೋಕಗ ।
ಳಲ್ಲಿ ಮಾಡಿಸಿಕೊಂಬಬಯಕೆಗಳಿಲ್ಲ ಬಳಿಸಂದು ॥ ೧೭ ॥

ಆದರಾಂಮಾಳ್ಪದನು ಮಾಡದೆ ।
ಹೋದರೆನ್ನನು ನೋಡಿ ಕರ್ಮದ ।
ಹಾದಿಯನು ಕಡೆಗಣಿಸಿಕಂಡೆಡೆಗೆಯ್ದಲನುವಾಗಿ ॥
ಈ ಧರೆಯ ಜನಜಾಲ ದುರ್ವಿಷ ।
ಯಾದಿ ಚಿಂತನೆಗಳಲಿ ತೊಡಗಿ ವಿ ।
ಷಾದವಡುವಂತಕ್ಕು ಸದ್ಧರ್ಮಗಳಿಗಳಿವಕ್ಕು ॥ ೧೮ ॥

ಆ ಮಹಾ ಸಂಕಟಕೆ ಕಾರಣ ।
ಧಾಮನಹೆನೀ ಜಗದಜನನಿ ।
ರ್ನಾಮವಹುದಾನುಳಿದೆ ನಾದರೆಕರ್ಮವನು ಕಡೆಗೆ ॥
ಸೋಮವಂಶಲಲಾಮ ಕೇಳು ।
ದ್ದಾಮನಂತಾಚರಿಸಿ ಕರ್ಮದ ।
ಸೀಮೆಯಲಿವಿಹರಿಸುವೆನವರಿಂ ನಿಸ್ಪೃಹತ್ವದಲಿ ॥ ೧೯ ॥

ಮೂಢರಾತ್ಮಜ್ಞಾನ ಶೂನ್ಯರು ।
ಮಾಡುವೊಲು ಕರ್ಮವನು ತಪ್ಪದೆ ।
ಮಾಡಲೇಬೇಕರಿತವರು ನಿಸ್ಸಂಗಬುದ್ಧಿಯಲಿ ॥
ಮಾಡದುಳಿದೊಡೆ ನಾಡುಬೀಡಿವು ।
ಕಾಡಹವು ಸಂಕಲ್ಪಗಳು ಮಿ ।
ಥ್ಯಾಡವದರಿಂಕೆಡಿಸಲಾಗದು ಕರ್ಮಸಂಗಿಗಳ ॥ ೨೦ ॥

ಎಣಿಸಿ ನೋಡೆಲೆ ಪಾರ್ಥಕರ್ಮದ ।
ಹೊಣೆಯಹೊತ್ತಿಲ್ಲವನು ತನ್ನಯ ।
ಗುಣದ ಬಲದಿಂಬಲಿದು ಮಾಡಿಸಿ ಸಕಲಲೋಕವನು ॥
ಕುಣಿಸುತಿಹುದೀ ಪ್ರಕೃತಿಯೆಂಬುದ ।
ನೆಣಿಸದಾನೇಮಾಳ್ಪೆನೆಂದು ।
ಬ್ಬಣದಹಂಕಾರದಲಿ ನುಡಿವನು ಮೂಢನಾದವನು ॥ ೨೧ ॥

ತನ್ನತಾನರಿತವನು ತನ್ನಿಂ ।
ಭಿನ್ನವಹ ಗುಣಕರ್ಮಗಳತಾಂ ।
ಮನ್ನಿಸದೆಮಮಕರಿಸದಿಹ ನಜ್ಞಾನವಶನಾಗಿ ॥
ಎನ್ನದೆಂದೇ ಬಗೆದುಮಮತೆಯ ।
ಪನ್ನೆಯಲಿ ಮೇಲ್ವೈದಿಕರ್ಮದ ।
ಬೆನ್ನಬಿಡದೋಡುವನು ಮಮಕರಿಸುವನುಮಾಳ್ಕೆಯಲಿ ॥ ೨೨ ॥

ಚಿಂತೆಯನು ಬಿಟ್ಟೇಳುಧುರಕೆ ಪ ।
ರಂತಪನೆ ನಿರ್ಮಮ ನಿರಾಶ ।
ಸ್ವಾಂತನಾಗಿರು ಮಾಡುವೀ ಕರ್ಮಗಳನೆಲ್ಲವನು ॥
ಸಂತಸಂದಳೆದೆನ್ನೊಳರ್ಪಿಸ ।
ನಂತವಹ ವಾಸನೆಗಳಡಗಿ ದು ।
ರಂತದುಃಖಗಳುಡುಗಿ ಸುಖವಹುದೆಂದನಸುರಾರಿ ॥ ೨೩ ॥

ಅರುಹಿದೆನು ನಿನಗೆನ್ನಮತವಿದ ।
ನರಿದುನಡೆವವರಖಿಳಕರ್ಮದ ।
ಪರಿಪರಿಯಬಂಧನವ ಕಳಚಿವಿಮುಕ್ತರೆನಿಸುವರು ॥
ಅರಿಯದವಿವೇಕಿಗಳಸೂಯಾ ।
ಪರರಹಂಕಾರದಲಿ ವರ್ತಿಸಿ ।
ಮರೆಯುವವರು ವಿನಾಶವಾಹರು ಪಾರ್ಥಕೇಳೆಂದ ॥ ೨೪ ॥

ಪ್ರಾಣಿಮಾತ್ರದೊಳಜ್ಞನಾಗಲಿ ।
ಜಾಣನಾಗಲಿ ವಿಷಯರಂಗವಿ ।
ತಾಣದಲಿ ಹಿಡಿದವರ ಕುಣಿಸದೆ ಪ್ರಕೃತಿಯದುಬಿಡದು ॥
ಮಾಣದಿಚ್ಛಾ ದ್ವೇಷವೆಂದಿರು ।
ವಾಣಿಗೊಳ್ಳದೆ ಘಾತಿಸುವ ಮು ।
ಳ್ಳಾಣಿಯದು ಕೊಳದಂತೆ ಕುಣಿದೊಡೆ ಭೀತಿಯಲ್ಲಿರದು ॥ ೨೫ ॥

ಅವಗುಣಗಳನಿತಿನಿತು ತನ್ನನು ।
ಭವಕೆಬಂದರು ಬಿಡದೆನಿಜ ಧ ।
ರ್ಮವನು ಪಾಲಿಸುತಿಹುದೆ ಶ್ರೇಯಸ್ಕರ ವಿಚಾರಿಸಲು ॥
ವಿವಿಧ ಸುಖಸಾಧನಕೆ ನೆಲೆಯನು ।
ಭವಕೆ ಸುಲಭವದೆಂದು ಪರ ಧ ।
ರ್ಮವನು ಕಾಲತ್ರಯದೊಳಾದರು ಬಯಸದಿಹುದೆಂದ ॥ ೨೬ ॥

ಅಧಿಕ ಧನ ಸಂಪತ್ತಿ ಸೌಖ್ಯಾ ।
ಸ್ಪದಕೆ ಸದನವದೆಂದು ಪರ ಧ ।
ರ್ಮದಲಿ ಬಾಳುವೆಗೊಂಬುದತಿಶಯ ಭೀತಿಯದರಿಂದ ॥
ಎದೆಗೆಡದೆ ತಂತಮ್ಮಧರ್ಮದೊ ।
ಳೊದಗಿ ಬಂದಾಪತ್ತಿನಿಂ ಸಂ ।
ಪದಕೆಸಲದೊಡನಿದ್ದು ಸವಾಸಾವೆ ಸೊಗಸೆಂದ ॥ ೨೭ ॥

ಸಾರಸಾಕ್ಷನೆ ತನ್ನಮನಸಿಗೆ ।
ಸೇರದಿದ್ದರು ಪಾಪಕರ್ಮಾ ।
ಚಾರಿಯಹನೆಂತೀ ಮನುಷ್ಯನು ದೇವ ಹೇಳೆನಲು ॥
ಘೋರ ಪಾಪಿಯದುಂಡುದಣಿಯದು ।
ದಾ ರಜೋಗುಣದಿಂದಲಂತವ ।
ತಾರವಾಂತೊಡೆ ಕೋಪವೆನಿಸುವ ಕಾಮವೆಲೆ ಪಾರ್ಥ ॥ ೨೮ ॥

ಹಗೆಯದೇಗಡುಸದರ ನಾನಾ ।
ಬಗೆಯ ಚೇಷ್ಟೆಗೆ ಸಂದು ದುಷ್ಕ ।
ರ್ಮಗಳೆಸಿಸಿದುರ್ಗತಿಗೆ ಸಲುವರು ಮೂಢಮಾನವರು ॥
ಉಗುವ ಹೊಗೆಯಿಂ ಕಿಚ್ಚುಕಿಲುಬಿಂ ।
ಮಿಗುವ ಕನ್ನಡಿ ಬಸಿರು ಪರೆಯಿಂ ।
ಮುಗಿದು ಮುಚ್ಚಿದವೋಲದಾಜ್ಞಾನವನು ಮುಸುಕಿಹುದು ॥ ೨೯ ॥

ನರನೆ ಬುದ್ಧೀಂದ್ರಿಯಗಳದರಧಿ ।
ಕರಣವಾಬಲದಿಂ ನಿಲುವುದದು ।
ಹೆರಿಸುವುದು ಸುಜ್ಞಾನ ಭಂಡಾರವನು ದೇಹಿಗಳ ॥
ಇರಿಸಿಮೊದಲದರಿಂದ ಪೇಳಿದ ।
ಪರಿಯಲಾ ಬುದ್ಧೀಂದ್ರಿಯಗಳನು ।
ಹರಿಸುವುದು ಜ್ಞಾನಾಪಹರಣದ ಪಾಪಿಯನು ಬಳಿಕ ॥ ೩೦ ॥

ಮಿಗಿಲೆನಿಸುವಿಂದ್ರಿಯಗಳಿಂದಲಿ ।
ಮಿಗಿಲು ಮನಸಾ ಮನಸಿನಿಂದಲಿ ।
ಮಿಗಿವೆನಿಸುವ್ವುದು ಬುದ್ಧಿ ಬುದ್ಧಿಗೆ ಮಿಗಿಲೆನಿಪುದಾತ್ಮ ॥
ಮಿಗಿಲದರಿನಿನ್ನಿಲ್ಲವೆಂಬೀ ।
ಬಗೆಯನರಿದಪ್ಪಳಿಸು ದೇಹಿಯ ।
ಹಗೆಯನಾತ್ಮನ ನಾತ್ಮಸಿಂ ಸ್ಥಿರಗೊಳಿಸಿ ಧೈರ್ಯದಲಿ ॥ ೩೧ ॥

ಕಾಮವನು ನೀಗೆಲಲುವೈರಿ ।
ಸ್ತೋಮ ಸೋಲ್ವುದು ನಿತ್ಯ ಸೌಖ್ಯದ ।
ಸೀಮೆಗರ್ಹಸಹೆ ಸರ್ವಥಾ ಸಂದೇಹ ಬೇಡಿದಕೆ ॥
ಕ್ಷೇಮವಾದಪುದೆಂದು ಖಳಕುಲ ।
ಭೀಮನಿರುಪಮ ಮಂಗಲ ಶ್ರೀ ।
ಭಾಮಿನೀವದನಾರವಿಂದ ದಿನೇಂದ್ರನುಸಿರಿದನು ॥ ೩೨ ॥



## ೪ನೆಯ ಸಂಧಿ

ಸೂ || ಜ್ಞಾನಗಮ್ಯನನಂತಮಹಿಮ |
ಸ್ಥಾನನುತ್ತಮಚರಿತ ನೊರೆದನು |
ಜ್ಞಾನ ಕರ್ಮಗಳಿಂಬಿಡಿದ ಸನ್ಯಾಸ ಯೋಗವನು ||

ನರನೆ ಕೇಳು ವಿವಸ್ವತಗೆವಿ |
ಸ್ತರಿಸಿ ಪೇಳಿದೆನೆಂದು ಶಾಶ್ವತ |
ತರವೆನಿಸುವೀ ಕರ್ಮಯೋಗವನಾತ ಮನುನೃಪಗೆ ||
ಅರುಹಿದನು ಮನುವೆಂದನಿದನಾ |
ದರದೊಳಿಕ್ಷ್ವಾಕುಗೆ ಪರಂಪರೆ |
ವೆರಸಿಪರಿವಿಡಿವಿಡಿದುಪಡೆದರು ರಾಜಋಷಿವರರು || ೧ ||

ಸಂದರಾಭೂಭುಜರು ಬಳಿಕದ |
ರಂದವಳಿದುದು ಕಾಲವಶದಲಿ |
ಮಂದಮತಿಗಳು ತಿಳಿಯದಾದರು ತದ್ರಹಸ್ಯಗಳ ||
ಇಂದು ನೀನೆನ್ನವನು ಭಕ್ತರ |
ಸಂದಣಿಯೊಳತಿ ನಿಪುಣನೆಂದಾ |
ನೆಂದೆನಿನಗಾ ವರಪುರಾತನ ಗೂಢಯೋಗವನು || ೨ ||

ಎಂದೊಡಿಂದಿಗೆ ಬಹಳ ದಿವಸಕೆ |
ಹಿಂದೆ ಹುಟ್ಟಿದನಾ ವಿವಸ್ವತ |
ಮುಂದೆ ಹುಟ್ಟಿದೆ ದೇವನೀನಾತಂಗೆ ನಿರವಿಸುವ ||
ಅಂದವೆಂತಾತನಲಿ ನಿನ್ನನು |
ಬಂಧ ವೆಂತಾಯ್ತುಸಿರೆನಲು ಗೋ |
ವಿಂದ ಕಿರುನಗೆ ಸೂಸಿನುಡಿದನು ಪಾರ್ಥಗುತ್ತರವ || ೩ ||

ಹಲವು ಜನ್ಮಗಳಾಯ್ತು ಸಂದುದು ।
ಫಲುಗುಣನೆ ಕೇಳ್ನಮಗೆ ನಾನಾ ।
ಹೊಲಬನರಿತಿಹೆ ನರಿಯೆ ನೀ ನಮಗಿನಿತೆ ಭೇದಗಳು ॥
ಸಲುವುವೆಲ್ಲದೆ ಮತ್ತೆನಗೆಭೂ ।
ವಲಯದಲಿ ಭಕ್ತರ ಮನೋರಥ ।
ದೊಲವಸಲಿಸಲು ಪುಟ್ಟುವೊಂದಾ ಭೇದಬೇರಿಹುದು ॥ ೪ ॥

ಸೊಕ್ಕಿದುಷ್ಕರ್ಮಿಗಳು ಸುಜನರ ।
ಸಿಕ್ಕಿನೆಲದೊಳಧರ್ಮ ಧರ್ಮವ ।
ಮಿಕ್ಕಿಸಿಂದೆಡೆಗೊಳುವ ಕಾಲದೊಳಾ ದುರಾತ್ಮರನು ॥
ಮುಕ್ಕಿ ಸುಜನರ ಸಲಹಿ ಧರ್ಮದ ।
ಹಕ್ಕೆಯನು ಹಾಸಿಡುವೊಡಾಂಜನ ।
ನಕ್ಕೆ ಬಂದಪೆನೆನ್ನ ಮಾಯಾಬಲದಿಯುಗ ಯುಗದಿ ॥ ೫ ॥

ತಿಳಿದ ಸಾತ್ವಿಕ ಮತಿಯ ಜನಜಂ ।
ಗುಳಿಯೊಳೆನ್ನೀ ಜನ್ಮಕರ್ಮ ।
ವಳಿಯ ಕಾರಣಕಾರ್ಯವೆಲ್ಲವ ತಿಳಿದ ಸಜ್ಜನರು ॥
ಅಳಿದ ಮೇಲೆನ್ನೊಡನೆ ಕೂಡುವ ।
ರಿಳೆಯೊಳಗೆ ತಿರುತಿರುಗಿ ಜನ್ನಂ ।
ಗಳ ಗಸಣಿಗೊಳಗಾಗಿ ಬನ್ನಂಬಟ್ಟು ಬಾಯ್ಬಿಡರು ॥ ೬ ॥

ಜ್ಞಾನತಪದಿಂ ಶುದ್ಧಿಗೊಂಡಿಹ ।
ಮಾನಿಸರು ಸರ್ವಸ್ವವೆನ್ನೊಳ ।
ಧೀನವೆಂದಾಶ್ರಯಿಸಿ ನಿಂದಿಹ ಮತ್ಪರಾಯಣರು ॥
ಮಾನಸದಿ ಭಯ ರಾಗ ಕೋಪಗ ।
ಳೀನುಮಂಕುರಿಸದ ಮಹಾಜನ ।
ರಾನುವರು ಮದ್ರೂಪವನು ದೇಹಾವಸಾನದಲಿ ॥ ೭ ॥

ಕುಂತಿಯಣುಗನೆ ಭಜಕಜನರಿಂ ।
ತೆಂತುಭಾವಿಸಿ ಪೂಜಿಸುವರಂ ।
ತಂತವರನೋಲಯಿಸಿ ನಡಸುವದೆನ್ನಭಾರವದು ॥
ಎಂತುನಾನಾಚರಿಸಿದಪೆ ನದ ।
ರಂತೆ ನಡೆವುದು ಲೋಕವದಕೆ ನಿ ।
ರಂತರದಿ ಕ್ರಮವರಿತು ನಡೆವೆನು ಸಿಟ್ಟಗೆಡದಂತೆ ॥ ೮ ॥

ಇಹಪರದ ಸೌಖ್ಯವನಪೇಕ್ಷಿಸಿ ।
ಬಹುಪರಿಯ ಕರ್ಮದಲಿ ಶ್ರಧ್ಧಾ ।
ವಹರೆನಿಸಿ ದೇವರ್ಕಳನುಪೂಜಿಸುವ ಮನುಜರಿಗೆ ॥
ಅಹುದಹುದು ಶೀಘ್ರದಲಿಫಲವದು ।
ಸಹಜವದರಿಂದಿಲ್ಲಿಕರ್ಮದ ।
ಕುಹರದಲಿ ಕೂಗಿಡುವರೇಹೆಚ್ಚಾದರೆಣಿಕೆಯಲಿ ॥ ೯ ॥

ಸಿಟ್ಟಿಸಿದೆನೀಮನುಜ ವರ್ಗದ ॥
ಹುಟ್ಟುಗುಣ ಕರ್ಮಗಳಿಗೊಪ್ಪುವ ।
ಕಟ್ಟಳೆಗಳಿಂ ನಾಲ್ಕುವರ್ಣಗಳೆಂದು ನಾನವಕೆ ॥
ಹುಟ್ಟುವೊಡೆ ಮೊಗ ತೋಳು ತೊಡೆ ಯಡಿ ।
ಯಷ್ಟನಂದೆಡೆಗೊಟ್ಟೆನಾದರು ।
ಕಟ್ಟುವಡೆಯದೆ ಕರ್ಮವಶದಿಂ ದೂರನೆನಿಸಿಹೆನು ॥ ೧೦ ॥

ಫಲದೊಳಾಸೆಯನುಳಿದು ಕರ್ಮವ ।
ನಲಸನಾಗದೆ ಮಾಳ್ಪೆನದರಿಂ ।
ಕಲಕಿಸೋಂಕವುಕರ್ಮಲೇಪಗಳೆನ್ನನಾಶ್ರಯಿಸಿ ॥
ಅಲಘುಮತಿ ಕೇಳೆನ್ನ ಸಿಷ್ಟ್ಯ ।
ದೊಲವಿದಿದನರಿತವರು ಕರ್ಮದ ।
ಬಲೆಯುರುಳ್ಗಳ್ಗಳಲಿ ಬಂಧಿತರೆನಿಸಿ ಬಸಗೆಡರು ॥ ೧೧ ॥

ಅವರಿವರ ಮಾತೇಕೆ ಸರ್ವ ।
ಸ್ವವನುಳಿದ ಮೋಕ್ಷಾರ್ಥಿಗಳುಸಹ ।
ಸವಿಸಿ ಕಾಯವನಾದಿಯಲಿ ಕೃತಕೃತ್ಯರಾಗಿರಲು ॥
ಭುವನದಲಿ ಸರ್ವಾರ್ಥಿಗಿನ್ನಾಂ ।
ವಿವರಿಸುವೊಡೇನಿಹುದು ನಿಜ ಧ ।
ರ್ಮವನು ರಕ್ಷಿಸಿ ನಡಸು ನೀಂನಿನ್ನಯ ಕುಲಕ್ರಮವ ॥ ೧೨ ॥

ನರನೆ ಕರ್ಮಾಕರ್ಮವೆಂತೆಂ ।
ದರಿದುಪೇಳುವುದೆನಲು ವಿದ್ವಾಂ ।
ಸರು ಸಹಿತ ಸಂಶಯವಗೊಂಬರು ಮೋಹವಶರಾಗಿ ॥
ಅರುಹುವೆನು ನಿನಗದನೆ ನೀನದ ।
ನರಿದು ನಡೆದೊಡೆ ಕರ್ಮದಿಂದಹ ।
ದುರಿತದಿಂ ನಿರ್ಮುಕ್ತನಹೆ ಸಂದೇಹ ಬೇಡಿದಕೆ ॥ ೧೩ ॥

ಧರ್ಮಜಾನುಜ ಕೇಳು ಕರ್ಮಾ ।
ಕರ್ಮಗಳ ಮೊದಲರಿದು ಬಳಿಕ ವಿ ।
ಕರ್ಮವಾವುದೆನುತ್ತ ತಿಳಿವುದು ಶುದ್ಧ ಬುದ್ಧಿಯಲಿ ॥
ಕರ್ಮದೊಳಕರ್ಮವ ನಕರ್ಮದಿ ।
ಕರ್ಮವನು ಕಂಡವನೆ ಜಾಣನು ।
ಕರ್ಮಪಥವತಿ ಕಠಿಣವೆಂಬುದನರಿತು ನಡೆಯೆಂದ ॥ ೧೪ ॥

ಆವನಾಶಾಸಂಗವರ್ಜಿತ ।
ಭಾವದಿಂದಲಿ ಮಾಳ್ಪನಾಕ ।
ರ್ಮಾವಳಿಗಳೆಲ್ಲವುಗಳಾತನ ತಿಳಿದತಿಳಿವೆಂಬ ॥
ಪಾವಕನ ದಳ್ಳುರಿಯೊಳುರಿದಿಹು ।
ದಾ ವಿಚಕ್ಷಣಮತಿಯನದರಿಂ ।
ದೀ ವಸುಧೆಯೊಳುಬುಧರು ಪಂಡಿತನೆಂದು ಪೇಳುವರು ॥ ೧೫ ॥

ಫಲದೊಳಾಸೆಯ ಹಿಡಿವ ಬುದ್ಧಿಯ ।
ಬಲವನಾಶ್ರಯಿಸದೆ ನಿರಾಶಾ ।
ಕಲಿತ ಮಾನಸನಾಗಿ ನಿತ್ಯದಿ ತೃಪ್ತಿಯನು ತಳೆದು ॥
ಅಲಘು ಲಘುವೆಂದಿರದೆ ಮಾಳ್ಪದ ।
ನೊಲಿದು ಮಾಡುತ್ತಿರುವವನೆ ನಿ ।
ಶ್ಚಲನವನು ನಿಷ್ಕರ್ಮಿಯೆಂಬುದ ನರಿತುಕೊಳ್ಳೆಂದ ॥ ೧೬ ॥

ಚಿತ್ತಶುದ್ಧಿಯ ತಳೆದು ಸಂಗನಿ ।
ವೃತ್ತನೆನಿಸಿ ನಿರಾಶೆಯಿಂ ಮಾ ।
ಡುತ್ತ ಕೆಯ್ಮೆಯ್ಯಿಂದಲಾಪುದನಾವನಿಹೆನವಗೆ ॥
ಹೆತ್ತದಂತಿಂತೆಂಬ ಕರ್ಮದ ।
ಬಿತ್ತಿನಿಂದಂಕುರಿಪ ಪಾಪದ ।
ಕುತ್ತದಣುಗಳ ಕೂಟವೆಂಬುದನರಿತುಕೊಳ್ಳೆಂದ ॥ ೧೭ ॥

ಒದಗಿ ದೈವೇಚ್ಛೆಯಲಿ ಬಹ ಲಾ ।
ಭದಲಿ ಸಂತಸವಾಂತು ಸುಖದುಃ ।
ಖದಲಿ ಸಮತೆಯ ತಾಳ್ದುಮತ್ಸರ ರಹಿತನಾಗಿರ್ಪ ॥
ವಿದಿತ ತತ್ವನು ಮಾಳ್ಪ ಯಜ್ಞಾ ।
ರ್ಥದ ವಿವಿಧ ಕರ್ಮಗಳವೆಲ್ಲವು ।
ಪುದಿದು ಬಂಧನವೆಸಗಲಾರದೆ ತಾವೆ ಲಯವಹವು ॥ ೧೮ ॥

ಬ್ರಹ್ಮಹವಿಯರ್ಪಣವು ಬ್ರಹ್ಮವು ।
ಬ್ರಹ್ಮವೆನಿಪಗ್ನಿಯೊಳಗುರಿವುದು ।
ಬ್ರಹ್ಮವಿಂತೆಬುದನು ಸತತಾಭ್ಯಾಸದಿಂದರಿದು ॥
ಬ್ರಹ್ಮಕರ್ಮ ಸಮಾಧಿಯಲಿ ಮತಿ ।
ನೆಮ್ಮಿತಾದೊಡೆ ಬೆರೆದು ಸಾಕ್ಷಾ ।
ದ್ಬ್ರಹ್ಮದಲಿ ತಾಂ ಬ್ರಹ್ಮನಹನೆಂದರಿತುಕೊಳ್ಳೆಂದ ॥ ೧೯ ॥

ಕೆಲರು ಬ್ರಹ್ಮಾಗ್ನಿಯಲಿ ಯಜ್ಞವ ।
ನೊಲಿದು ಹೋಮಿಸಿ ಯಜಿಸುವರು ಕೆಲ ।
ಕೆಲರು ಯಜ್ಞಂಗಳಲಿ ದೇವತೆಗಳನು ಭಜಿಸುವರು ॥
ಕೆಲರು ಸಂಯಮರೂಪಪಾವಕ ।
ನಲಿ ಸಮಸ್ತೇಂದ್ರಿಯವ ಹೋಮಿಸಿ ।
ಸಲಿಸಿ ಯಜನಕ್ರಿಯೆಯ ಸೌಖ್ಯದೊಳಿಹರು ನಿತ್ಯದಲಿ ॥ ೨೦ ॥

ಕೆಲರು ಶ್ರೋತ್ರಾದೀಂದ್ರಿಯ ಪ್ರ ।
ಜ್ವಲನದಲಿ ಶಬ್ದಾದಿ ವಿಷಯಾ ।
ವಲಿಯ ಹೋಮಿಸುವರು ದಶೇಂದ್ರಿಯ ಜನಿತಕರ್ಮವನು ॥
ಲಲಿತ ಪಂಚಪ್ರಾಣ ಕರ್ಮಾ ।
ವಲಿಯನೆಲ್ಲವ ನಾತ್ಮ ಸಂಯಮ ।
ಫಲಿತ ಸುಜ್ಞಾನಾಗ್ನಿಯಲಿ ಯಜಿಸುವರು ಕೆಲರೆಂದ ॥ ೨೧ ॥

ಸತತ ಸಮಬುದ್ಧಿಯಲಿ ಕಠಿಣ ।
ವ್ರತವ ನಿಂತಾಚರಿಸಿ ತೋರುವ ।
ಯತಿಗಳೊಳು ಸಂಯಮನ ಶೀಲರೆನಿಪ್ಪ ಕೆಲಕೆಲರು ॥
ವಿತತ ಯೋಗ ಜ್ಞಾನ ದ್ರವ್ಯೋ ।
ಚಿತ ತಪಸ್ವಾಧ್ಯಾಯ ಮೊದಲಾ ।
ದತಿಶಯದ ಯಜ್ಞಾಂಗ ಸಂಗದಿ ಮಗ್ನರೆನಿಸಿಹರು ॥ ೨೨ ॥

ಪ್ರಾಣವನಪಾನದಲಪಾನವ ।
ಪ್ರಾಣದಲಿ ಹೋಮಿಸುವರಿಂತ ।
ಕ್ಷೀಣಪುಣ್ಯರು ಕೆಲರು ಪ್ರಾಣಾಯಾಮ ತತ್ಪರರು ॥
ಪ್ರಾಣದಲಿ ಹೋಮಿಸುವರೆಡಗದೆ ।
ಪ್ರಾಣವನು ಮಿತದಪ್ಪದೂಟದ ।
ಹೊಣಿಗರು ಕೆಲರೆಲ್ಲರಿವರಘವಳಿವ ಯಾಜ್ಞಿಕರು ॥ ೨೩ ॥

ಸುಜ್ಞರಿಂತೊಂದೊಂದು ವಿಧವಹ ।
ಯಜ್ಞವನು ಕೆಯ್ಗೊಂಡು ನಡೆದಾ ।
ಯಜ್ಞಶೇಷವನುಂಡು ಕೂಡುವರವರು ಬೊಮ್ಮದಲಿ ॥
ಯಜ್ಞಶೇಷವನುಂಬೊಡಾರದ ।
ಯಜ್ಞವೆನಲದನರಿಯದಿಪ್ಪನ ।
ಭಿಜ್ಞರಿಂಗಿಹಪರದ ಸುಖ ಸದ್ಗತಿಗಳಿಲ್ಲೆಂದ ॥ ೨೪ ॥

ಇಂತು ವಿಧ ವಿಧದಿಂದ ವಿಸ್ತರ ।
ವಾಂತಮುಖಗಳು ಬ್ರಹ್ಮಮುಖದಿ ನಿ ।
ರಂತರದಿ ಮೆರೆದಿರುವುವಾಯಜ್ಞಗಳು ಕರ್ಮಗಳ ॥
ತಂತುವಿಂದೊಗೆದಿಹ ಪಟಗಳಿಂ ।
ದಂತರಂಗದ ದೃಢತೆಯಿಂ ನಿ ।
ಶ್ಚಿಂತೆಯಿಂದಿರು ಮುಕ್ತನಹೆಯ್ಯೆಪಾರ್ಥ ನೀನೆಂದ ॥ ೨೫ ॥

ಜ್ಞಾನದಲಿ ಕರ್ಮಗಳ ಪರ್ಯವ ।
ಸಾನವಹುದದರಿಂದ ವಿದಿತ ವಿ ।
ಧಾನ ನಾನಾ ದ್ರವ್ಯಮಯವಹ ಸಕಲ ಯಜ್ಞಗಳಿಂ ॥
ಜ್ಞಾನಯಜ್ಞವೆ ಮಿಗಿಲಿದರೊಳನು ।
ಮಾನವಿಲ್ಲೆಲೆ ಪಾರ್ಥ ಸಮ್ಯಗ್ ।
ಜ್ಞಾನವಾದೊಡೆ ನಿನ್ನೊಳೀಪರಿ ಮೋಹ ವೆಡೆಗೊಳದು ॥ ೨೬ ॥

ಒಳಗೆತಿಳಿವೆಂಬಿನನುದಯದಲಿ ।
ಬೆಳಗಿತೆನೆ ಭೂತಾದಿಗಳನೊಂ ।
ದುಳಿಯದೆಲ್ಲವನಂತೆ ಕಂಡಪೆ ನೀನೆ ನಿನ್ನೊಳಗೆ ॥
ಬಳಿಕ ಕಾಂಬಯ್ಯೆನ್ನೊಳಂತಾ ।
ತಿಳಿವೆ ಘೂರ್ಮಿಸಿ ಮೊರೆವ ಪಾಪದ ।
ಜಳನಿಧಿಯನುತ್ತರಿಸುವಗ್ಗದ ನಾವೆಯರಿಯೆಂದ ॥ ೨೭ ॥

ಉರಿವ ಕಿಚ್ಚಿನೊಳಿಟ್ಟ ಕಟ್ಟಿಗೆ ।
ಹೊರೆಗಳೆಲ್ಲವು ಬೂದಿಯಹವೋ ।
ಲರಿವೆನಿಸುವಗ್ನಿಯಲಿ ಕೀಳ್ಮೇಲೆಂಬ ಗೆಯ್ಮೆಗಳ ॥
ಹಿರಿದ ಪುಳ್ಳಿಯ ಹೊರೆಗಳವು ಸು ।
ಟ್ಟುರಿಯುವವು ಸಂದೇಹ ಬೇಡಿ ।
ನ್ನರಿವಿನಿಂ ಸುಪವಿತ್ರತರವಹ ವಸ್ತುವಿಲ್ಲೆಂದ ॥ ೨೮ ॥

ಪಡೆವರದನೇ ಯೋಗ ಸಿದ್ಧಿಯ ।
ಪಡೆದವರು ಕಾಲಾನುಭಾಗದಿ ।
ಪಡೆವರಾತ್ಮಧ್ಯಾನಲಾಲಸರಾಗಿ ಶ್ರದ್ಧೆಯಲಿ ॥
ಬಿಡದೆ ಗುರುವಚನವನು ಪಾಲಿಸಿ ।
ನಡೆದು ಸರ್ವೇಂದ್ರಿಯಗಳನು ಬಿಡ ।
ದೊಡಬಡಿಸಿ ನಿಲಿಸುವ ಸಮರ್ಥರು ಪಾರ್ಥಕೇಳೆಂದ ॥ ೨೯ ॥

ಜ್ಞಾನವೆನೆ ದುಃಖೋಪ ಶಮನ ।
ಸ್ಥಾನವತಿದುರ್ಲಭವು ಮತ್ತಾ ।
ಜ್ಞಾನವಾದೊಡೆ ಪರಮ ಶಾಂತಿಯ ಪಡೆವನವನೆಂದ ॥
ಜ್ಞಾನಸಂಗವಿದೂರ ಶ್ರದ್ಧಾ ।
ಹೀನ ಸಂಶಯ ಚಿತ್ತನಾದೊಡೆ ।
ತಾನ್ನಳಿವನಿಹಪರಕೆ ಸಲ್ಲದೆ ಸೌಖ್ಯವನು ಕೆಡಿಸಿ ॥ ೩೦ ॥

ಯೋಗ ಬುದ್ಧಿಯ ಬಲದಿ ಕಾರ್ಯೋ ।
ದ್ಯೋಗವನು ಪರಿಹರಿಸಿ ಶಂಕೆಯ ।
ನೀಗಿ ಸಮ್ಯಗ್ ಜ್ಞಾನದಿಂ ಭೂತಾದಿ ತತ್ವಗಳ ॥
ತೂಗಿದಾತ್ಮಜ್ಞಾನಿಯನುಭವ ।
ರೋಗವಂಟದು ಕರ್ಮಬಂಧದ ।
ಬೇಗೆ ಬೇಗುದಿಗೊಳಿಸದೆಂದನು ದಾನವಧ್ವಂಸಿ ॥ ೩೧ ॥

ಜ್ಞಾನ ಖಡ್ಗವ ಜಡಿದು ನಿನ್ನ ।
ಜ್ಞಾನದಿಂ ಪುಟ್ಟಿರ್ದ ಸಂಶಯ ।
ಕಾನನವ ಕಡಿದಿಕ್ಕಿ ಸಮತೆಯ ತಳೆದು ವೈರಿಗಳ ॥
ಸೇನೆಗಿದಿರಾಗೇಳು ನಿಲ್ಲೆಂ ।
ದಾ ನರೋತ್ತಮ ಮಂಗಲ ಶ್ರೀ ।
ಮಾನಿನೀರಮಣೊಡಬಡಿಸಿ ಬೋಧಿಸಿದನರ್ಜುನಗೆ ॥ ೩೨ ॥



## ಐನೆಯ ಸಂಧಿ

ಸೂ || ವಾಸವಾತ್ಮಜಗೆಂದನಂಭೋ |
ಜಾಸನಾದಿಸುರೌಘನುತನಹೆ |
ವಾಸುದೇವನು ವಿಸ್ತರಿಸಿ ಸನ್ಯಾಸಯೋಗವನು ||

ಕರ್ಮಸನ್ಯಾಸವನು ಮಿಗಿಲೆಂ |
ದೊರ್ಮೆಪೊಗಳುವೆ ಪೊಗಳುವೈಮಿಗೆ |
ಕರ್ಮಯೋಗವನೊಮ್ಮೆನೀನಿಂತೆರಡು ಮಾರ್ಗದಲಿ ||
ಪೆರ್ಮೆವಡೆದಿಹುದಾವುದದನೇ |
ಕೂರ್ಮೆಯಿಂ ನಿಶ್ಚಯಿಸಿ ತಿಳುಹೈ |
ನಿರ್ಮಲಾತ್ಮಜ್ಞಾನ ಸಾಧನವನು ಸರೋಜಾಕ್ಷ || ೧ ||

ಲೇಸನಾಡಿದೆ ಪಾರ್ಥ ಕೇಳ್ಸ |
ನ್ಯಾಸವಾಗಲಿ ಕರ್ಮವಾಗಲಿ |
ಮಿಾಸಲಾಗಿಹವೆರಡು ದಾರಿಗಳವು ನಿಜೋನ್ನತಿಗೆ ||
ಆ ಸುಪಥಗಳೊಳಧಿಕತರದಾ |
ಯಾಸದೋರದೆ ಪ್ರೋಪಕರ್ಮೋ |
ಪಾಸನೆಯ ಹೆದ್ದಾರಿಯೇ ಮಿಗಿಲೆಂದು ನಿಶ್ಚಯಿಸು || ೨ ||

ವೀತರಾಗದ್ವೇಷಮತಿಯಾ |
ರಾತನೇ ಸನ್ಯಾಸಿ ದ್ವಂದ್ವಾ |
ತೀತನಿನ್ನಾರಾತನೇ ವರಯೋಗಿ ಲೋಕದಲಿ ||
ನೀತಿವಿದರದರಿಂದ ಮಕ್ಕಳ |
ಮಾತಿನಂದದೊಳೆರಡು ವಿಧವೆಂ |
ದೇತಕೆಂಬರು ಸಾಂಖ್ಯಯೋಗಂಗಳನು ಫಿಂಗಡಿಸಿ || ೩ ||

ಪೋಪರೆಲ್ಲಿಗೆ ಸಾಂಖ್ಯರಲ್ಲಿಗೆ ।
ಪೋಪರಾಯೋಗಿಗಳು ದೊರೆವ ಫ ।
ಲೋಪಭೋಗಗಳೊಂದೆ ಕೂಡುವ ತಾಣವಿಂತೊಂದೆ ॥
ಲೋಪದೋಷಗಳಿಲ್ಲದೆರಡರೊ ।
ಳಾಪುದೊಂದೇ ತೆರದ ಸಿದ್ಧಿಯು ।
ರೂಪವೆನಲೇಂ ಭಿನ್ನ, ಭಿನ್ನತೆ ನಾಮ ಮಾತ್ರವಲ ॥ ೪ ॥

ಯೋಗಮತಿಯಲ್ಲದೊಡೆ ಕರ್ಮ ।
ತ್ಯಾಗಿಯಾಗಲಿ ಕರ್ಮಿಯಾಗಲಿ ।
ಹೋಗಿಪಡೆವೊಡೆಸಲ್ಲನವನಾದಿವ್ಯ ಸಂಪದವ ॥
ಯೋಗ ಮತಿಯಾಗಿರ್ದ ಮುನಿತಾ ।
ನಾಗಿ ಸಂದಾಪದಕೆ ಚಿಂತಾ ।
ಸಾಗರವನುತ್ತರಿಸಿನಿಲುವನು ನಿತ್ಯ ಸುಖಿಯಹೆನು ॥ ೫ ॥

ಗೆಲಿದು ಸರ್ವೇಂದ್ರಿಯವ ಯೋಗವ ।
ಬಲಿದು ಶುದ್ಧಾಂತಃಕರಣದೊಳ ।
ಗೊಲಿದು ತೋರುವ ಸಕಲ ಭೂತದೊಳಾತ್ಮನಾನೆಂದು ॥
ನಲಿದುಮಾಳ್ಪಾತಂಗೆ ಬಂಧನ ।
ದಲಗು ತಾಗದು ಸಕಲ ಕರ್ಮದ ।
ಕಲುಷದಿಂದ ವಿದೂರನಾಗಿ ವಿಮುಕ್ತನಹೆನವನು ॥ ೬ ॥

ನೋಡಲಾಘ್ರಾಣಿಸಲಿ ಕೇಳಲಿ ।
ಆಡಲೊರಗಲಿ ಮಲಗಲುಣ್ಣಲಿ ।
ಕೂಡಲೋಡಲಿ ಕೊಡಲಿ ಕೊಳ್ಳಲಿ ಬಿಡಲಿ ಹಿಡಿದಿರಲಿ ॥
ಮಾಡುವೀ ಕರ್ಮಗಳಿವೆಲ್ಲವು ।
ಕೂಡಿದಿಂದ್ರಿಯ ನಿಕರಗಳ ಕೈ ।
ಪಾಡವೆಂದವುಗಳಲಿ ಮಮತೆಯ ಹಿಡಿಯರುತ್ತಮರು ॥ ೭ ॥

ಮಣಿದುಮೇಲೆದ್ದಾಡಿನೀರೊಳು ।
ಮುಣುಗುವಂಬುಜ ಪತ್ರದಲಿವಾಃ ।
ಕಣವದಾದರು ಹೊಂದಿ ನಿಲಲೆಡೆಯಾಗದಂದದಲಿ ॥
ಅಣುಮಹತ್ತುಗಳೆಂಬ ಭೇದವ ।
ನೆಣಿಕೆಗೊಳದಪ್ಪುದನು ಬಹ್ಮಾ ।
ರ್ಪಣವೆನುತ ಮಾಡಿದೊಡೆಹೊದ್ದದು ದುರಿತವಾತನಲಿ ॥ ೮ ॥

ತಿದ್ದಿ ಬರೆಹಂ ಬರೆವೊಲು ಮನೋ ।
ಬುದ್ಧಿದೇಹೇಂದ್ರಿಯದೊಳಾತ್ಮವಿ ।
ಶುದ್ಧಿಗೋಸುಗ ನಿರ್ಮಮತ್ವದಿ ಮಾಳ್ಪಯೋಗಿಗಳು ॥
ಹೊದ್ದದಾ ಕೃತಕರ್ಮ ಸಂಚಯ ।
ಕಿದ್ದಫಲವನು ಪರಮ ಶಾಂತಿಯ ।
ಹೊದ್ದುವರು ಹೊದ್ದುವರು, ಫಲಕಾಂಕ್ಷಿಗಳು ಬಂಧನವ ॥ ೯ ॥

ಬಿಡಿಸಿ ಕರ್ಮದ ಫಲದೊಳಿಚ್ಛೆಯ ।
ಹಿಡಿವ ಮನದಭ್ಯಾಸವನು ಹದ ।
ವಡಿಸಿ ಸಕಲೇಂದ್ರಿಯವನಾಳುವ ದೇಹಿಯೆಂಬರಸು ॥
ಪಡುವನುತ್ತಮ ಸೌಖ್ಯವನು ತಡೆ ।
ಗಿಡೆಗಳಿರದೊಂಬತ್ತುವಾಗಿಲು ।
ವಡೆದು ಸಿಂಗರವಾಂತ ತನುವೆಂದೆಂಬಪತ್ತನದಿ ॥ ೧೦ ॥

ಕರ್ಮಫಲ ಸಂಗವನು ಲೋಕದ ।
ಕರ್ಮವನು ಕರ್ತೃತ್ವವನು ಸಹೆ ।
ನಿರ್ಮಿಸಿದನೀ ವಿಶ್ವನಾಯಕನೆಂದು ಬಗೆಯದಿರು ॥
ಕರ್ಮವನು ಮಾಳ್ಪವರ ಸದ್ದು ।
ಷ್ಕರ್ಮಗಳೊಳಹ ಮೇಲುಕೀಳ್ಗಳ ।
ನೊರ್ಮೆಯಾದರು ಹೊರುವುದಕೆ ಹೊಣೆಗಾರನವನಲ್ಲ ॥ ೧೧ ॥

ಆಪುದೆಲ್ಲವು ಪ್ರಕೃತಿ ಗುಣದಿಂ ।
ದಾಪುದಲ್ಲದೆ ತಿಳಿವಿದೆಂಬೀ ।
ದೀಪವಜ್ಞಾನಾಂಧಕಾರದಿ ಮುಸುಕಿಹುದರಿಂದ ॥
ಪಾಪಿಗಳು ಮೋಹಿಪರು ಸುಕೃತಕ ।
ಳಾಪರಂಜಿತರದನು ಹರಿದೊಗೆ ।
ದಾ ಪರಮತತ್ವಪ್ರಭಾದಿನಕರನ ಕಂಡಪರು ॥ ೧೨ ॥

ಆ ಪರಮತೇಜದಲಿ ತನ್ಮಯ ।
ರಾ ಪರಮನಲಿ ನಿರತಮತಿಯುತ ।
ರಾ ಪರಮತತ್ವದಲಿ ನಿಷ್ಠಾವಂತರಾದವರು ॥
ಪಾಪಲೇಪವ ನಮಲಸುಜ್ಞಾ ।
ನೋಪಜೀವನದಿಂದ ತೊಳೆದ ಮ ।
ಹಾಪುರುಷಪುಂಗವರು ಜನ್ಮವಿದೂರರಹೆರವರು ॥ ೧೩ ॥

ತಾನೆತಾನಾಗಿರ್ದ ಸಮತಾ ।
ಮಾನಸದ ಮತಿಯುತಗೆ ಸೃಷ್ಟಿವಿ ।
ಧಾನವೇಬೇರೊಂದು ಬಗೆಯಿಂಕಾಂಬುದಾತಂಗೆ ॥
ಆನೆಯಿದು ಚಾಂಡಾಲನೀತನು ।
ಶ್ವಾನವಿದು ವರವಿಪ್ರನಿವನಿದು ।
ಧೇನುವೆಂಬೀ ಭೇದವಾ ಪಂಡಿತನೊಳೆಡೆಗೊಳದು ॥ ೧೪ ॥

ಇಷ್ಟವದು ಕೆಯ್ಗೂಡಿತೆನೆ ಸಂ ।
ತುಷ್ಟನಾಗದೆ ಚಿಂತಿಸದೆ ಕೆ ।
ಯ್ಬಿಟ್ಟೊಡದನೊಂದೇ ವಿಧಾನದೊಳರಿದು ಜೀವಿತದಿ ॥
ಕೆಟ್ಟಿನೆನ್ನೆದ ಮೋಹದಿಂ ಮರ ।
ವಟ್ಟಿನೆನ್ನದ ಸಂದ ಸರ್ವೋ ।
ತ್ಕೃಷ್ಟತರಮತಿಯವನು ಬ್ರಹ್ಮಪದಸ್ಥನಹನೆಂದ ॥ ೧೫ ॥

ಹೊರಗೆ ತೋರುವ ಸಕಲ ವಸ್ತು ।
ತ್ಕರದೊಳಹ ಸುಖಗಳನು ಸುಖವೆಂ ।
ದರಿಯದಿರು ದುಃಖಾದಿಹೇತುಗಳವು ವಿಚಾರಿಸಲು ॥
ಹರಿಯಗೊಡದಿಂದ್ರಿಯವನೊಳಗೊಳ ।
ಗರಸಿ ಪಡೆದೆಡೆಗೊಂಡ ಸುಖವೇ ।
ಪರಮ ಸುಖವು ಪವಿತ್ರತರವಕ್ಷಯವದರಿಯೆಂದ ॥ ೧೬ ॥

ಕಡುಗಿ ಕಾಮಕ್ರೋಧಗಳು ತಂ ।
ದೊಡರಿಸುವ ತಾಪದಲಿ ಬೇಗುದಿ ।
ವಡೆಯದಿಹನವನಾವನೀಮೆಯ್ವಿಡಿದ ಜೀವರೊಳು ॥
ಕಡುಸುಖಿಯು ಬಂದೆಡರಿನಲಿ ಕಂ ।
ಗೆಡದ ನಿಶ್ಚಲ ಮತಿಯು ಬಾಹ್ಯದ ।
ಗೊಡವೆಯಲಿ ಬೆಂಡಾಗದಂತರ್ಮುಖಿಯು ನೋಡವನು ॥ ೧೭ ॥

ಆವನಂತಜ್ಯೋತಿ ಬೆಳಗಿಹು ।
ದಾವನಾತ್ಮಾರಾಮನಾಗಿಹ ।
ನಾವನಂತಸ್ಸುಖಸಮಾಶ್ರಿತ ಚಿತ್ತನೆನಿಸಿಹನು ॥
ಆವುದೆಂತಿರಲದನು ಬ್ರಹ್ಮದ ।
ಭಾವನೆಯಲೇ ತಿಳಿದು ಕಂಡಿಹ ।
ನಾ ವಿಮಲಯೋಗಾತ್ಮನುತ್ತಮ ಪದವ ನೆಯ್ದುವನು ॥ ೧೮ ॥

ಭೂತಹಿತರತರಾತ್ಮಸಂಯಮು ।
ಚೇತಸರು ನಿಷ್ಕಲ್ಮಷರು ನಿ ।
ರ್ಧೂತ ದುರಿತರು ಕಾಮಕೋಪಾದ್ಯರಿ ವಿನಾಶನರು ॥
ವೀತರಾಗದ್ವೇಷಚಿತ್ತರು ।
ಖ್ಯಾತರಹ ಸಜ್ಜನರು ನಿಜ ಸೌ ।
ಖ್ಯಾತಿಶಯವಹ ಬ್ರಹ್ಮನಿರ್ವಾಣವನು ಹೊದ್ದುವರು ॥ ೧೯ ॥

 

ಇರಿಸಿಭ್ರೂಮಧ್ಯದಲಿ ನೋಟವ ।
ನೆರಗಗೊಡದಿಂದ್ರಿಯವ ವಿಷಯದಿ ।
ತೊರೆದು ಭಯಕೋಪಗಳ ಪ್ರಾಣಾಪಾನಗಳ ಗತಿಯ ॥
ಸರಿಗೊಳಿಸಿ ಪರತತ್ವಚಿಂತಾ ।
ಪರಮನೋಮಯರೆನಿಪರವರೆ ।
ಲ್ಲಿರುವ ರಲ್ಲಿಯೆ ಬ್ರಹ್ಮಪದವೆಂದರಿತುಕೊಳ್ಳೆಂದ ॥ ೨೦ ॥

ಅಕುಟಿಲ ತಪೋಯಜ್ಞಕರ್ಮ ।
ಪ್ರಕರಗಳ ಭೋಕ್ತಾರನಾನೀ ।
ಸಕಲಲೋಕಾಧ್ಯಕ್ಷ ಭೂತಾದಿಗಳ ಸಖನೆಂದು ॥
ಸುಕರದಿಂದರಿದಾತನೇ ನಿಜ ।
ಸುಖವ ಪಡೆವನು ಶಾಂತತಾ ಗಿರಿ ।
ಶಿಖರದಲಿ ಸುಳಿದಾಡಿ ಸಂತಸವಾಂಪ ನವನೆಂದ ॥ ೨೧ ॥

ನರನೆ ಕೇಳ್ಸನ್ಯಾಸಯೋಗವ ।
ನರುಹಿದೆನು ನಿನಗಾಗಿ ಮತ್ತಿದ ।
ನರಿದು ಪೇಳ್ದಂದದಲಿ ನಡೆವವರಾವರಾಗಿರಲಿ ॥
ಪರಮ ಶಾಂತಿಯ ಪಡೆವರೆಂದಾ ।
ಪರಮ ಪಾವನ ಮಂಗಲ ಶ್ರೀ ।
ತರುಣಿಯಾಣ್ಮ ಖಗೇಶ್ವರಧ್ವಜನೊಲಿದು ಬೋಧಿಸಿದ ॥ ೨೨ ॥

—o⬭o—

## ೬ನೆಯ ಸಂಧಿ

ಸೂ ॥ ದಾನವಾಂತಕನಖಿಳಸೃಷ್ಟಿನಿ ।
ದಾನನೂರ್ಜಿತಸತ್ವನಮಲ ।
ಧ್ಯಾನಯೋಗವನರುಹಿದನು ಕುಂತೀ ಕುಮಾರಕಗೆ ॥

ಆವನಾಶ್ರಯರಹಿತನಾಗಿ ಫ ।
ಲಾವಳಿಗಳಲಿ ಕರ್ಮವನು ಕೈ ।
ಗಾವನವನೇ ಯೋಗಿ ಮತ್ತಿನ್ನವನೆ ಸನ್ಯಾಸಿ ॥
ಈ ವಿಧಿಯನೊಲ್ಲದೆ ವೃಥಾಹಂ ।
ಭಾವದಿಂ ನಿಷ್ಕ್ರಿಯನೆನಿಸಿನಿಂ ।
ದಾವನಗ್ನಿಯನಳಿವನವನಾಪದಕೆ ಹೊರಗಹೆನು ॥ ೧ ॥

ಆವುದಾ ಸನ್ಯಾಸವೆಂಬುದು ।
ಭೂವಲಯದಲಿ ಯೋಗವೆನಲದು ।
ಭಾವಿಸಲು ಸಂಕಲ್ಪವನು ಸನ್ಯಾಸಗೊಳಿಸದೊಡೆ ॥
ಆವನಾಗಲಿ ಯೋಗಿಯೆನಿಸನ ।
ದಾವನಿನ್ನಿಹನಾರುರುಕ್ಷ್ನುಪ ।
ಥಾವಲಂಬನನಾ ಮಹಾಮುನಿಪ್ರೋತ್ತಮನಶಮಕೆ ॥ ೨ ॥

ಮಾಡಲೊದಗುವ ಕರ್ಮವೇಕೆ ।
ಯ್ಯೂಡಿಸುವ ಕಾರಣವದಿನ್ನಾ ।
ರೂಢಯೋಗಿಯ ಕರ್ಮಗಳಿಗಾ ಶಮ ಕಾರಣವು ॥
ಕೂಡಿದೀ ವಿಷಯೇಂದ್ರಿಯದೊಳೋ ।
ಲಾಡಿಸಂಕಲ್ಪದಲಿ ಮನವೆ ।
ದ್ದೋಡದಾರಿಂಗವರು ಯೋಗಾರೂಢರೆನಿಸುವರು ॥ ೩ ॥

ತನಗೆ ತನ್ನಾತುಮನ ಮೇಲ್ನೆಲೆ।
ಗೊನರಿಸುವ ಬಲುಹಿಪ್ಪುದದರಿಂ।
ಮನುಜನೆಯ್ದಿಸಲಾಗಸಾತನನರಿದುಕೀಳ್ನೆಲೆಗೆ॥
ತನಗೆ ಮಿತ್ರನು ತಾನೆ, ತಾನೇ।
ತನಗೆ ಹಗೆಯುಂತಲ್ಲದೀ ಮೇ।
ದಿನಿಯೊಳಿನ್ನೊಬ್ಬನಲಿ ಕೆಳೆಹಗೆತನಗಳಿಲ್ಲೆಂದ ॥ ೪ ॥

ತಾನದಾರೆಂದರಿಯಲರಿಯದ।
ಮಾನವನು ಹಗೆಯಾಗಿ ತನ್ನಿಂ।
ತಾನೆ ಸಲುವನು ತನಗೆ ತನ್ನಯ ಬುದ್ಧಿ ಶೂನ್ಯತೆಯಿಂ॥
ತಾನರಿದು ತನ್ನೊಳಗೆ ತನ್ನನು।
ತಾನೆತಾನಾಗಿರ್ದು ಶಾಂತಿ।
ಸ್ಥಾನವನು ಪಡೆದವನು ದ್ವಂದ್ವವನುಳಿದು ಸುಖಿಸುವನು ॥ ೫ ॥

ನಿಗುಚಿ ನಿಲುವಿಂದ್ರಿಯವ ಹಿಡಿದಡಿ।
ಮಗುಚಿ ಸಮ್ಯಗ್ ಜ್ಞಾನ ವಿಜ್ಞಾ।
ನಗಳೊಳಾಶ್ರಯ ವಡೆದು ಕೂಟಸ್ಥಾನದಲಿ ಸಂದು॥
ಬಗೆಯಿನಾ ಬಂಗಾರ ಕಲ್ಮ।
ಣ್ಣುಗಳ ಭೇದವನುಳಿದ ನಿಜಯೋ।
ಗಿಗಳ ಬಲ್ಲಹನಾವನಾತನೆ ಯುಕ್ತನೆನಿಸುವನು ॥ ೬ ॥

ಶತ್ರುವೀತನು ಸಖನಿವನು ಗುಣ।
ಗಾತ್ರನಿವನವನಧಿಕ ದುಷ್ಕೃತ।
ಪಾತ್ರನೀತನು ಸಜ್ಜನನು ಮತ್ತಿವನುದಾಸೀನ॥
ಪುತ್ರನಿವನೆಂದಿವರೊಳಗೆ ತಿಲ।
ಮಾತ್ರ ಭೇದವ ಹಿಡಿಯದಿಹ ಸುಪ।
ವಿತ್ರಮತಿಯಿನ್ನಾವನವನುತ್ತಮನು ಯುಕ್ತರಲಿ ॥ ೭ ॥

ವಾಸವಾತ್ಮಜ ಕೇಳು ಯೋಗಾ ।
ಭ್ಯಾಸದಲಿ ಸಿದ್ಧಿಯನು ಪಡೆಯುವ ।
ಸಾಸದಲಿಹಿರಿದಾದ ಬಯಕೆಯ ಮನುಜನಾದಿಯಲಿ ॥
ಆಸೆಯಿಂ ತೊಲತೊಲಗಿ ಬುದ್ಧಿಯ ।
ವಾಸನೆಯ ಪರಿಹರಿಸಿ ತನ್ನ ನಿ ।
ವಾಸಕನುಕೂಲವನು ಮಾಳ್ಪುದು ನಿರ್ಜನ ಸ್ಥಳವ ॥ ೮ ॥

ಸ್ವಚ್ಛವಾದಾ ಸ್ಥಳದಿ ನೆಲವನು ।
ಕರ್ಚಿನೀರೊಳು ಹರಹಿ ದರ್ಭೆಯ ।
ಬಿಚ್ಚಿ ಹರಿಣಾಜಿನದ ಹಾಸನು ಹಾಸಿ ಸಮಗೊಳಿಸಿ ॥
ಹೆಚ್ಚು ತಗ್ಗೆತ್ತರಗಳಾಗದೊ ।
ಲೆಚ್ಚರಿಕೆಯಿಂ ನೋಡಿ ತಿಳಿದೊಂ ।
ದಚ್ಚುಗಟ್ಟಾದಾಸನವನಳವಡಿಸಿ ಕುಳ್ಳಿರ್ದು ॥ ೯ ॥

ಕೊರಲು ಮೆಯ್ದುಲೆಗಳನು ಬಾಗದೊ ।
ಲಿರಿಸಿ ಸಮರೇಖೆಯಲಿ ದೃಷ್ಟಿಯ ।
ನಿರಿಸಿ ನಾಸಾಗ್ರದಲಿ ಬೇರೊಂದನು ನಿರೀಕ್ಷಿಸದೆ ॥
ತೊರೆದು ಭೀತಿಯ ಬ್ರಹ್ಮಚರ್ಯದ ।
ನಿರಿಗೆ ಸಡಿಲಿಡದಂತೆ ಕಂಡೆ ।
ಚ್ಚರದಿ ಚಿಂತಿಪುದೆನ್ನನೇಕಾಗ್ರತೆಯೊಳೆಡೆವಿಡದೇ ॥ ೧೦ ॥

ಇಂತು ಯೋಗಾಭ್ಯಾಸದಲಿ ಪೇ ।
ಳ್ದಂತೆ ಸಂಯಮ ಚಿತ್ತನಾಗಿ ನಿ ।
ರಂತರದಿ ನಡೆಗೊಂಡೊಡೆನ್ನಾಶ್ರಯದಿ ನೆಲೆಯಾಂತ ॥
ಶಾಂತಿಯನು ಕೊಡುವೆನ್ನ ನಿಜದಲಿ ।
ತಾಂ ತಡೆಯದೊಳಗಾಗಿಸುವ ಸೌ ।
ಖ್ಯಾಂತರಾಳವೆನಿಪ್ಪ ನಿರ್ವಾಣವನು ಹೊದ್ದುವನು ॥ ೧೧ ॥

ಮಿತವಿಹಾರಾಹಾರ ನಿದ್ರಾ ।
ಸ್ಥಿತಗೆ ಯೋಗಾಭ್ಯಾಸದಿಂ ಸು ।
ಸ್ಥಿತಿಯೊದಗಿ ಸುಖವಪ್ಪುದಲ್ಲದೆ ಸಿದ್ಧಿಗಿಡುಕರಿಗೆ ॥
ಅತಿಶಯಾಹಾರಿಗಳಿಗತಿನಿ ।
ದ್ರಿತರಿಗೆ ನಿರಾಹಾರಿಗಳಿಗುಪ ।
ಹತಿಯಹುದು ಸುಖವಾಗದದರಿಂ ಪಾರ್ಥಕೇಳೆಂದ ॥ ೧೨ ॥

ಅಳಿದು ಮನಸಿನ ಸಕಲ ಕಾಮನೆ ।
ಗಳು ಸುಳಿವ ಸುಳಿಗಾಳಿ ಗೊಳ್ಳದ ।
ನಿಳಯದೊಳಗೇಕಪ್ರಕಾರದೊಳುರಿವ ಸೊಡರಂತೆ ॥
ಅಳುಕದಾತ್ಮಧ್ಯಾನ ಚಿಂತನೆ ।
ಯೊಳಗೆ ಚಿತ್ತದ ವೃತ್ತಿ ಸಂದೆಡೆ ।
ಗೊಳುವುದಾರೊಳಗವರೆಯುಕ್ತರು ಪಾರ್ಥಕೇಳೆಂದ ॥ ೧೩ ॥

ಇತ್ತ ಕೇಳಭ್ಯಾಸಬಲದಿಂ ।
ದತ್ತಲಿತ್ತಲು ಸುಳಿವ ಮನಸಿನ ।
ವೃತ್ತಿ ಸಮಸಂದೆತ್ತರಮಿಸುವುದಾತ್ಮನೊಳು ಬೆರೆದು ॥
ಮತ್ತೆತನ್ನಾತ್ಮಕ್ಕೆ ಸಂತಸ ।
ವೆತ್ತಣಿಂದಹುದಲ್ಲಿನಿಂದ ।
ತ್ಯುತ್ತಮ ಸ್ಥಿತಿಯೆನಲು ಯೋಗಸ್ಥಿತಿಯದರಿಯೆಂದ ॥ ೧೪ ॥

ಎಲ್ಲಿದುಃಖಗಳಳುಕಿಸವು ಮ ।
ತ್ತೆಲ್ಲಿ ನಿಂದೊಡೆ ಪತನಭಯವಿರ ।
ದೆಲ್ಲಿ ನಿಜಸುಖವಡಗದಿಪ್ಪುದಲಭ್ಯ ಲಭಿಸುವುದು ॥
ಎಲ್ಲಿ ಬುದ್ಧಿಯದಲ್ಲದಿನ್ನೊಂ ।
ದಲ್ಲಿನಿಂದರಿಯಲ್ಕರಿಯದೆಂ ।
ದಲ್ಲಿ ನಿಂದಸ್ಥಿತಿಯೆ ಯೋಗಸ್ಥಿತಿಯದರಿಯೆಂದ ॥ ೧೫ ॥

ಪರಮ ಶಾಂತಿಯ ಪಡೆದ ಪಾಪದ ।
ಕುರುಹುನೋಳ್ಪೊಡೆ ಸಿಗದ ಬೊಮ್ಮದೊ ।
ಳಿರಕಗೊಂಡೋರಂತೆನಿಂದ ರಜೋಗುಣಾಂಬರವ ॥
ಹರಿದೊಗೆದ ಯೋಗಾಧಿರೂಢರ ।
ಹಿರಿಯನಿವನೆಂಬಾತನೇ ತಾ ।
ನರಿದು ತನ್ನೊಳಗನುಭವಿಸುವನು ಸೌಖ್ಯ ಸಂಪದವ ॥ ೧೬ ॥

ವಿನಯಮತಿ ಕೇಳ್ಸರ್ವಭೂತಾ ।
ತ್ಮನೊಳುತನ್ನಾತ್ಮವನು ತನ್ನಾ ।
ತ್ಮನೊಳು ಭೂತಾತ್ಮಂಗಳನು ಕಂಡರಿದ ಯೋಗಾತ್ಮ ॥
ಎನಗೆ ಹೊರಗಲ್ಲಾತನಾತಂ ।
ಗನುದಿನದಿ ಹೊರಗಲ್ಲನಾನವ ।
ನಿನಿತು ಸರ್ವದೊಳೆನ್ನನೆನ್ನೊಳುಕಾಂಬನೆಲ್ಲವನು ॥ ೧೭ ॥

ಅಂತರಂಗದೊಳೆನ್ನನೇ ಸ ।
ರ್ವಾಂತರಸ್ಥಿತನೆಂದರಿದು ನಿ ।
ಶ್ಚಿಂತೆಯಲಿ ತಾವಾರು ಭಜಿಸುವರೈಕ್ಯಬುದ್ಧಿಯಲಿ ॥
ಎಂತಿರಲಿ ಬಹಿರಂಗದಲಿ ಮೇ ।
ಣೆಂತು ನಡೆಯಲಿ ಬಾಹ್ಯಪಥದಲಿ ।
ಸಂತಸದೊಳಿಹರಾ ಮಹಾ ಯೋಗಾತ್ಮರೆನ್ನೊಡನೆ ॥ ೧೮ ॥

ಸರ್ವ ಸುಖದುಃಖಗಳ ಗಣಿಸದೆ ।
ಸರ್ವರನು ತನ್ನಂತೆ ನೋಡುವ ।
ಸರ್ವದಲಿ ಸಮದೃಷ್ಟಿಯಿಂ ವರ್ತಿಸುವ ಮಾನವನು ॥
ಸರ್ವರಿಂ ಮಾನಿತನು ತಿಳಿವೊಡೆ ।
ಸರ್ವರಿಂದುತ್ತಮನು ಲೋಕದಿ ।
ಸರ್ವ ಸಂಗ ವಿದೂರನಾತನು ಪಾರ್ಥಕೇಳೆಂದ ॥ ೧೯ ॥

ಎಂದೊಡೆಲೆ ಮಧುಸೂದನನೆ ನೀ ।
ನೆಂದವೋಲಭ್ಯಾಸ ವಶದಲಿ ।
ನಿಂದು ಶಾಂತಿಯ ತಳೆದು ಸಮಬುದ್ಧಿಯಲಿ ಸುಸ್ಥಿತಿಯ ॥
ಹೊಂದಲಹುದೇ ಸುಸ್ಥಿರತೆ ತ ।
ನ್ನಿಂದ ತಾನೇ ಶಿಥಿಲವಹುದೀ ।
ಸಂದೆಯಕ್ಕೆಡೆಯಾದುದದರಿಂ ದೇವ ಹೇಳೆಂದ ॥ ೨೦ ॥

ಚಂಚಲವಲಾ ಕೃಷ್ಣ ಮನವಿದು ।
ಸಂಚರಿಸಿ ಕಂಡೆಡೆಯನಿಂದು ಪ ।
ಳಂಚಿಪರಿದಪುದತಿಬಲಿಷ್ಠವಿದತಿ ಕಠಿಣತರವು ॥
ಹಿಂಚಿ ಜೀವನ ಹಿಂಡಿಹಿಳಿವಿದ ।
ನಿಂಚಲಿಸದೊಲು ಹಿಡಿದಿಡುವುದೆನೆ ।
ಸಂಚಯಿಸಿ ಗಾಳಿಯನು ಕಟ್ಟಿಡುವನಿತುಕಷ್ಟವಲೆ ॥ ೨೧ ॥

ಹೋಹೊ! ಫಲುಗುಣ ನಿನ್ನೊಳೀ ಸಂ ।
ದೇಹವಾದುದು ಸಹಜ ಚಂಚಲ ।
ವಾಹ ಮನವಭ್ಯಾಸ ವೈರಾಗ್ಯಗಳ ನೆರವಿಂದ ॥
ಆಹುದದುವಶವರ್ತಿಯೆಂದೆಂ ।
ಬೀ ಹವಣ ಪುಸಿಯಲ್ಲ ನುಡಿದುದು ।
ಸಾಹಸದ ಮಾತಲ್ಲ ಸತ್ಯವು ನಂಬುನೀನೆಂದ ॥ ೨೨ ॥

ಆದರವಧರಿಸಾತ್ಮಸಂಯಮ ।
ಸಾಧಕಗೆ ಯತ್ನದಲಿ ಯೋಗವ ।
ನಾಧರಿಸಿ ಸಿದ್ಧಿಯನು ಪಡೆವುದಸಾಧ್ಯವೆಂದಿಲ್ಲ ॥
ಸಾಧನೆಯನಳಿದುಳಿದ ಶ್ರದ್ಧೆಯ ।
ಹಾದಿಗಾರಗೆ ನಿಲುಕದೆನಲಂ ।
ತಾದುದಾದರೆ ದೇವಕೇಳುಕ್ಕೆವದಿ ಶ್ರದ್ಧೆಯನು ॥ ೨೩ ॥

ಬಳಸಿ ಮನಸಿನ ಚಂಚಲತೆಯಿಂ ।
ದಳುಕಿ ತದ್ಯೋಗದಲಿ ಸಿದ್ಧಿಯು ।
ಗಳಿಸಲಾರದೆ ಹೋದವನೆನೆ ಝುಂಝಾನಿಲನ ಹತಿಗೆ ॥
ಬಳಿದ ಮೇಘ ಸಮೂಹ ವೆಣ್ದೆಸೆ ।
ಗಳಲಿ ಪರಿವೊಲು ಯೋಗ ಭೋಗಂ ।
ಗಳ ಸುಖಕೆ ಹೊರಗಾಗಿ ಕಿಡನೇ ಹೇಳು ಹೇಳೆಂದ ॥ ೨೪ ॥

ಪೃಥೆಯಣುಗ ನೀನೆಂದ ರೀತಿಯ ।
ಯತಿಯವನು ಪಾಳಹನೆ ಸಲೆಸ ।
ದ್ಗತಿಗೆ ಭಾಜನನಪ್ಪನಿಹಪರಲೋಕವೆರಡಲಿ ॥
ವಿತತ ಶುಭಕಾರ್ಯವನು ಕೈಗೊಂ ।
ಬತಿಶಯದ ಶ್ರದ್ಧಾಳು ತಾಂ ದು ।
ರ್ಗತಿಗೆ ಸಲುವನೆ ತಂದೆ ಯೋಗ ಭ್ರಷ್ಟನಾದವನು ॥ ೨೫ ॥

ಸಾರಿದಪನಾ ಪುಣ್ಯವಂತರ ।
ಸೇರಿಕೆಯ ನೆಲೆಯೆನಿಪ ಲೋಕವ ।
ನೂರುವತ್ಸರವಲ್ಲಿ ಸೊಗವಿದ್ದೀ ನೃಲೋಕದಲಿ ॥
ಚಾರು ಶೀಲದ ಭಾಗ್ಯವಂತರ ।
ಸಾರ ಬುದ್ಧಿಯ ಯೋಗಿಗಳ ಸಂ ।
ಸಾರದೊಳಗಾವುದರೊಳಾದರು ಮರಳಿ ಜನಿಸುವನು ॥ ೨೬ ॥

ಪುಟ್ಟಿಪಿಮ್ಮೆಯ್ಮಾಟದೊಳಗಡಿ ।
ಯಿಟ್ಟು ನಡೆವನು ಪಡೆಯದೊಡೆ ಮರು ।
ವುಟ್ಟಿನೊಳಗಿಂತಿಂತು ಮೆಲ್ಲನೆ ನಡೆದು ಸಿದ್ಧಿಯನು ॥
ಕಟ್ಟಕಡೆಯಲಿ ಭವದ ಬಂಧನ ।
ವಟ್ಟುಳಿಯಕೆಡೆಮೆಟ್ಟಿ ಪಡೆದು ।
ತ್ಕೃಷ್ಟವಹ ಪರಮಾತ್ಮಪದವನು ನಿಂದು ಸುಖಿಸುವನು ॥ ೨೭ ॥

ಮಾನವರೊಳಧಿಕರು ಮಹಾಸು ।
ಜ್ಞಾನಿ ಕರ್ಮಠವರತಪಸ್ವಿಗ ।
ಳೀ ನೆಲದೊಳವರಿಂದಲಧಿಕನು ಕರ್ಮಯೋಗಿಕಣ ॥
ಏನು ಬಂದರು ಬರಲಿ ಹೋದರ ।
ದೇನು ಹೋಗಲಿ ಯೋಗಿಯಾಗೆಲೆ ।
ಮಾನನಿಧಿಯರ್ಜುನನೆ ನೀನಿನ್ನಾವ ಭಯವಿರದೆ ॥ ೨೮ ॥

ನರನೆ ಕೇಳ್ತನ್ನಂತರಾತ್ಮನ ।
ನಿರಿಸಿ ಶ್ರದ್ಧೆಯೊಳೆನ್ನೊಳೇ ಸು ।
ಸ್ಥಿರದಿ ಚಿಂತಿಪನಧಿಕನರಿಯಾ ಯೋಗಯುಕ್ತರೊಳು ॥
ಒರೆದೆನೆನ್ನಭಿಮತವಿದೆಂದಾ ।
ದರದಿ ಶುಭಕರ ಮಂಗಲ ಶ್ರೀ ।
ಯರಸ ಸರಸಿಜನೇತ್ರ ಸನ್ನುತಿಪಾತ್ರನುಸಿರಿದನು ॥ ೨೯ ॥

—०()०—

## ೭ನೆಯ ಸಂಧಿ

ಸೂ || ಜ್ಞಾನ ವಿಜ್ಞಾನಂಗಳೆಂದೊಡ |
ದೇನೆನುವುದನು ಪಾಕಶಾಸನ |
ಸೂನುಗಭಿವರ್ಣಿಸಿದನಾ ಮುರಮಥನನುಚಿತದಲಿ ||

ಇನ್ನೊರೆವೆನೆಲೆ ಪಾರ್ಥ ನೀಕೇ |
ಳೆನ್ನೊಳತ್ಯಾಸಕ್ತಿಯನು ಬಿಡ |
ದೆನ್ನೊಳಾಶ್ರಯವಡೆದು ಯೋಗಾಭ್ಯಾಸವಶನಾಗಿ ||
ಎನ್ನನಾರೆಂದರಿಯದಿರಲವ |
ನುನ್ನತಿಕೆಗೆಡೆಯೆತ್ತಲದರಿಂ |
ಮುನ್ನ ತಿಳಿಯಾ ಜ್ಞಾನ ವಿಜ್ಞಾನಗಳನುಚಿತದಲಿ || ೧ ||

ಅದನೆ ಪೇಳುವೆ ನಿನಗೆ ನೀನಂ |
ತದನು ತಿಳದೊಡೆ ಲೋಕದಲಿ ಮಿ |
ಕ್ಕುದನು ತಿಳಿವಾವಶ್ಯಕತೆಯೆಂತಾದರೆಡೆಗೊಳದು ||
ಅದನೆ ಸರ್ವೋತ್ಕೃಷ್ಟ ಸಾಧನ |
ಸದನವೆಂಬರು ಬಲ್ಲವರು ಮ |
ತ್ತದರ ದೆಸೆಯಿಂದೆನ್ನ ಪೂರ್ಣಜ್ಞಾನವಾದಪುದು || ೨ ||

ಹಬ್ಬಿಹೆರಿದೀ ಜನದಿ ಮರವೆಯ |
ಮಬ್ಬಿನಿಂ ಪೆರಗೆಯ್ದಿ ಸಾವಿರ |
ಕೊಬ್ಬನೇ ಸಿದ್ಧಿಯನಪೇಕ್ಷಿಸಿ ಯತ್ನಿಸುವನಿಲ್ಲಿ ||
ಹೆಬ್ಬಯಕೆಯಲಿ ಸಂದಸಂತಸ |
ದುಬ್ಬಿನಿಂದೆಡೆಗೊಂಡ ಸಿದ್ಧರೊ |
ಳೊಬ್ಬನೇ ಕಂಡರಿವನೆನ್ನಯ ನಿಜವನಿಂತೆಂದು || ೩ ||

ಸೋಮವಂಶವರೇಣ್ಯ ಕೇಳ್ಳೈ ।
ಭೂಮಿ ಸಲಿಲಾನಲ ಸಮೀರ ।
ವ್ಯೋಮ ಹಂಕೃತಿ ಬುದ್ಧಿಮನವೆಂದೆಂಟು ತೆರನಿವಕೆ ॥
ನಾಮವಪರವನಂತ ಭೂತ ।
ಸ್ತೋಮಜೀವಾಂಕುರದ ಬೀಜಕೆ ।
ನಾಮವೇ ಪರವಿಂತು ಪ್ರಕೃತಿಗಳೆರಡು ತೆರವಿಹವು ॥ ೪ ॥

ಎರಡೆನಿಪ್ಪವುಗಳೊಳು ಸಕಲವ ।
ಧರಿಸಿನಿಂದುದು ಪರವದೆಂದರಿ ।
ಹರಣಗೊಂಡಾಪ್ರಕೃತಿಜನಿತ ಸಮಸ್ತವನು ಬಿಡದೆ ॥
ತಿರುಗಿ ಪುಟ್ಟಿಸುವಾತನಾನೆಂ ।
ದರಿತುಕೊಳ್ಳೈ ವಿಶ್ವವೆಂಬೀ ।
ಪರಿಪರಿಯ ಮಣಿಗಣದ ಮಾಲೆಗೆ ಸೂತ್ರವಾನರಿಯ ॥ ೫ ॥

ನೀರಿನಲಿ ರಸವಾನು ಚಂದ್ರಮ ।
ಸೂರರಲಿ ಸುಪ್ರಭೆಯದಾನೋಂ ।
ಕಾರವಾನು ಸಮಸ್ತ ವೇದಂಗಳಲಿ ಪುರುಷರಲಿ ॥
ತೋರುತಿಹ ಪೌರುಷವದಾನೀ ।
ಧಾರಿಣೀ ಗಗನಗಳ ಗಂಧೋ ।
ದಾರಶಬ್ದಗಳಾನು ತೇಜವದಾನು ವಹ್ನಿಯಲಿ ॥ ೬ ॥

ವರತಪಸ್ವಿಯು ತಾಪಸರೊಳಾ ।
ನುರುತರದ ಭೂತಾದಿಗಳ ಕೂ ।
ಡಿರುವ ಜೀವನಶಕ್ತಿಯಾನೀ ಭೂತಕೋಟಿಗಳ ॥
ಹೆರಹಿ ಪುಟ್ಟಿಪ ಬೀಜವಾನೀ ।
ಸ್ಥಿರಮತಿಗಳಲಿ ಮತಿಯದಾನೀ ।
ಭರಿತ ತೇಜಸ್ವಿಗಳ ತೇಜವದಾನು ನೋಡೆಂದ ॥ ೭ ॥

ಬಲಯುತರೊಳಿಹೆ ರಾಗವರ್ಜಿತ ।
ಬಲವು ಕಾಮಿಗಳೊಳಗೆ ಧರ್ಮದ ।
ಹೊಲಬುದಪ್ಪದ ಕಾಮವೆಂದೆನಲಾನು ಲೋಕದಲಿ ॥
ಬಲಿದ ಸತ್ವ ರಜಸ್ತಮಸ್ಸಂ ।
ಕುಲದಿ ಭಿನ್ನವಿಭಾವವೆನ್ನಿಂ ।
ದಲೆ ಸಮುದ್ಭವವಾದುದದರಿಂ ಭಿನ್ನವಾನೆಂದ ॥ ೮ ॥

ತ್ರಿಗುಣಮಯವಹ ಭಾವನೆಗಳಿಂ ।
ಬಿಗಿವಡೆದ ಲೋಕವಿದು ತಿಳಿಯದು ।
ತ್ರಿಗುಣ ಸಂಗವಿದೂರನೆನ್ನ ವಿನಾಶವರ್ಜಿತನ ॥
ತ್ರಿಗುಣಮಯಿ ಮಾಯಾ ವಿಲಾಸಿನಿ ।
ಯುಗಿದಗಳನುತ್ತರಿಸಿ ನಿಂದಾ ।
ಸುಗತಿಗೆಯ್ದುವೊಡಾರರೆನ್ನನು ಮರೆದು ನಡೆವವರು ॥ ೯ ॥

ಮಿಗುವ ಪುಣ್ಯರೊಳಿಲ್ಲಿ ಜಿಜ್ಞಾ ।
ಸುಗಳು ಶೋಕಗ್ರಸ್ಥರರ್ಥಾ ।
ರ್ಥಿಗಳು ಸುಜ್ಞಾನಿಗಳು ತಾವೊಂದೊಂದು ತೆರನಾಗಿ ॥
ಬಗೆದು ಭಜಿಸುವರೆನ್ನನಿಂತವ ।
ರುಗಳು ಮಾಯಾಮೋಹಿತರು ದು ।
ರ್ಭಗರು ದುಷ್ಕೃತರಾವಬಗೆಯಿಂ ಭಜಿಸಲಿಚ್ಛಿಸರು ॥ ೧೦ ॥

ಭಕ್ತರಾ ನಾಲ್ಬಗೆಯೊಳವರಲಿ ।
ಯುಕ್ತನಾದೊಂದೇ ಪ್ರಕಾರದ ।
ಭಕ್ತಿಯುತ ಸುಜ್ಞಾನಿಯೇ ಮಿಗಿಲೆನಗೆ ಸುಪ್ರಿಯನು ॥
ಭಕ್ತನಾದಾತಂಗತಿ ಪ್ರಿಯ ।
ವ್ಯಕ್ತಿಯಾನಂತಲ್ಲದೀ ಪೂ ।
ರ್ವೋಕ್ತ ಭಕ್ತರುದಾರರೆಲ್ಲರು ಪಾರ್ಥಕೇಳೆಂದ ॥ ೧೧ ॥

ಜ್ಞಾನಿಯೆನಲೆನ್ನಾತ್ಮನಂತಾ ।
ಜ್ಞಾನಿಯುತ್ತಮ ಗತಿಯ ನೆಲೆವನೆ ।
ಯಾನೆನುವ ಸುಸ್ಥಿರತೆಯಿಂ ಯುಕ್ತಾತ್ಮನಾಗಿರ್ದ ॥
ಮಾನಿಯಾಜನ್ಮದೊಳಗಲ್ಲದೊ ।
ಡೇನು ಜನ್ಮಾಂತರದೊಳಾದರಿ ।
ದೇನಿದೆಲ್ಲವು ವಾಸುದೇವನೆನುತ್ತಲರಿದಪನು ॥ ೧೨ ॥

ಒಕ್ಕಣಿಪೆನೆಂತಾ ಮಹಾತ್ಮನ ।
ಲೆಕ್ಕಿಗರ ಮೊದಲಿಗನನೀಲೋ ।
ಕಕ್ಕೆ ಪೂಜ್ಯನ ತಿಳಿದ ತಿಳಿವಿನ ತಿರುಳಿನಂತಿಹನ ॥
ಲೆಕ್ಕಕೆಣೆಯಹನೊರ್ವನಾದರು ।
ಸಿಕ್ಕುವನೆ ದುರ್ಲಭವಲಾ ಜನ ।
ನಕ್ಕೆ ಬಂದ ನೃಜನ್ಮ ಸಫಲತೆಯಪ್ಪುದಂತವನ ॥ ೧೩ ॥

ಬಗೆಬಗೆಯ ಬಯಕೆಯಲಿ ಮರುಳಹ ।
ಮುಗುದರವರಂತಃಸ್ವಭಾವ ।
ಪ್ರಗತಿಗೊಪ್ಪುವ ದೇವರನು ಪೆಸರ್ಗೊಂಡು ಭಜಿಸುವರು ॥
ಸಗುಣ ಪೂಜಾನಿರತರೆನಿಪುವ ।
ರುಗಳ ಸುಸ್ಥಿರಬುದ್ಧಿ ಶ್ರದ್ಧಾ ।
ದಿಗಳೊಲವಿನಂತವರ್ಗೆ ಕಾಮಿತಗಳನು ಕೊಡುತಿಹೆನು ॥ ೧೪ ॥

ಆವರಿನ್ನವರವರ ಬುದ್ಧಿಯ ।
ಭಾವನೆಗೆ ತಕ್ಕಂದದಿಂದಾ ।
ವಾವದೈವವ ಭಜಿಸುವರು ತದ್ದೈವದೆಡೆಗವರು ॥
ಧಾವಿಸುವರಾಯೆಡೆಯಶಾಶ್ವತ ।
ವಾವರೆನ್ನನೆ ಭಜಿಸುವರು ನಿಜ ।
ಭಾವದಿಂದವರೆನ್ನ ಶಾಶ್ವತಪೆಡೆಯನೈದುವರು ॥ ೧೫ ॥

ವಾದಿಸುವರಲ್ಲದೆ ವೃಥಾ ದು ।
ರ್ವಾದಶೀಲರು ಯೋಗಮಾಯಾ ।
ಚ್ಛಾದಿತನ ಕಂಡರಿಯರೆನ್ನನು ಸುಪ್ರಭಾಮಯನ ॥
ಸಾಧಿಸುವರವ್ಯಕ್ತನಿವನೆಂ ।
ದಾದವನ ಸುವ್ಯಕ್ತನೆಂದೇ ।
ಬೋಧಶೂನ್ಯರು ಮೂಢರವರೆಂದನು ಮುರಧ್ವಂಸಿ ॥ ೧೬ ॥

ಭೂತವರ್ಗದ ಗತಿ ವಿನಾಶೋ ।
ದ್ಭೂತಗಳನಾಂ ಬಲ್ಲೆ ದ್ವಂದ್ವೋ ।
ಪೇತವಾದಾ ಭೂತವರ್ಗವದೆನ್ನನರಿತಿರದು ॥
ಪಾತಕದ ಹೆಸರಿಲ್ಲದಿಪ್ಪ ಪು ।
ನೀತರತಿನಿರ್ಮಲರು ದ್ವಂದ್ವಾ ।
ತೀತರೆನ್ನನು ನೆನೆವಸುವ್ರತರೆನ್ನನರಿತಿಹರು ॥ ೧೭ ॥

ಜರೆ ಜನನ ಮರಣಗಳ ಬಂಧವ ।
ಹರಿದೊಗೆದು ಸಾಹಸದಿ ನಿಂದವ ।
ರರಿವರಧ್ಯಾತ್ಮವನು ಬ್ರಹ್ಮವನಖಿಳಕರ್ಮವನು ॥
ಅರಿವರಧಿದೈವಾಧಿ ಭೂತಗ ।
ಳಿರವನಧಿಯಜ್ಞವನು ಸಹ ತಾ ।
ವರಿವರೆನ್ನನು ಯುಕ್ತಚಿತ್ತರು ಸರ್ವಸಮಯದಲಿ ॥ ೧೮ ॥

ಅರಿತಿರುವುದರಿದಲ್ಲವಾ ಸು ।
ಸ್ಥಿರ ಮನಸ್ಕರು ಸರ್ವಕಾಲದೊ ।
ಳರಿಕೆಗೆಡರಿನ್ನಂತ್ಯಕಾಲದೊಳಾದರವರೆಂಬ ॥
ಪಿರಿಯತನವಾ ಯೋಗ ಯುಕ್ತಾ ।
ತ್ಮರಿಗೆನುತ ವರ ಮಂಗಲ ಶ್ರೀ ।
ಕರತಲಾರುಣ ಕಿರಣರಂಜಿತಚರಣನುಸುರಿದನು ॥ ೧೯ ॥



## ಅನೆಯ ಸಂಧಿ

ಸೂ ॥ ಮೋಕ್ಷದಾಯಕನುಸಿರಿದನು ಪರ।
ಪಕ್ಷಭೀಷಣನಾದ ಪಾರ್ಥಂ।
ಗಕ್ಷರಬ್ರಹ್ಮವಿದೆನಿಪ್ಪೀ ಗೂಢಯೋಗವನು॥

ಪರಮ ಪುರುಷನೆ ಬ್ರಹ್ಮವೆನಲೇ।
ನರುಹು ಮತ್ತಧ್ಯಾತ್ಮವೆನಲೇ।
ನರುಹು ಕರ್ಮವದಾವುದಧಿಭೂತಾಧಿ ದೈವಗಳ॥
ಗುರುತದೇನಧಿಯಜ್ಞದೇಹದೊ।
ಳಿರುವುದೆಂತಾ ನಿಯತಚಿತ್ತರು।
ಮರಣ ಸಮಯದಿ ನಿನ್ನನರಿದೇನಹದು ಹೇಳೆಂದ ॥ ೧ ॥

ಎಂದ ಕುಂತೀನಂದನಂಗರ।
ವಿಂದಲೋಚನನೆಂದ ಕೇಳೆಂ।
ದೆಂದಿಗಾದರು ನಾಶಹೊದ್ದದ ಪರಮನೇ ಬ್ರಹ್ಮ॥
ಅಂದಗೆಡದಿಪ್ಪಾ ಸ್ವಭಾವಕೆ।
ಸಂದಪೆಸರಧ್ಯಾತ್ಮವೀತೆರ।
ದಿಂದಭೂತವಿಕಾರಿತೆಯದಹೆ ಗೈತ್ತವೇ ಕರ್ಮ ॥ ೨ ॥

ಮಾತ ಕೇಳಿನ್ನಳಿವವುಗಳಧಿ।
ಭೂತವಂತವುಗಳಲಿ ಪುರುಷ।
ಖ್ಯಾತ ಸಂಜ್ಞಿತ ದೈವ ತಾನಧಿದೈವವೆನಿಸುವುದು॥
ಖ್ಯಾತಿವಡೆದಧಿಯಜ್ಞ ನಾನೇ।
ಭೂತವರ್ಗಾದಿಗಳ ನಿಜಸಂ।
ಘಾತದೊಳಗೆಡೆಗೊಂಡು ನಿಂದಧಿದೇಹನೆನಿಸಿಹೆನು ॥ ೩ ॥

ಅಂತಕಾಲದೊಳೆನ್ನನೇ ನಿ।
ಶ್ಚಿಂತೆಯಿಂ ಯುಕ್ತಾತ್ಮರಾಗಿ ನಿ।
ಜಾಂತರಂಗದಿ ನೆನೆವ ಮಾನವರೀ ಶರೀರವನು ॥
ಪಿಂತುಳುಹಿ ನಡೆಗೊಂಡ ಮೇಲ।
ತ್ಯಂತ ತೇಜೋರಾಶಿಯಹ ಭ।
ಕ್ತಾಂತರಸ್ಥಿತನೆನ್ನನೇ ಹೊದ್ದುವರು ಕೇಳೆಂದ ॥ ೪ ॥

ಆವ ಭಾವನೆಯಿಂದಲೀ ದೇ।
ಹಾವಸಾನದಿ ಚಿಂತಿಸುವರಾ।
ಭಾವದೊಲವಿದ್ದಂತೆ ಸಲುವರು ಸಕಲರದಕಾಗಿ ॥
ಸಾವಸಮಯದಿ ನಿಯತನಿರ್ಮಲ।
ಭಾವವೆಡೆಗೊಳುವೊಡೆ ಸದಾ ಸ।
ದ್ಭಾವದಿಂ ಭಾವಿಸುವುದಾರಾಗಿರಲಿ ಸರ್ವವನು ॥ ೫ ॥

ಸ್ಥಿರತೆಯಾಂತಭ್ಯಾಸ ಬಲದಿಂ।
ಹರಿಯಗೊಡದೊಂದೇ ಪ್ರಕಾರದೊ।
ಳಿರಿಸಿಚಿತ್ತವನೆನ್ನಚಿಂತಿಪನಾವನನುದಿನದಿ ॥
ಪರಮ ಪುರುಷವರೇಣ್ಯ ಪಾವನ।
ಚರಿತ ಪುಣ್ಯಶ್ಲೋಕ ವಿಶ್ವೇ।
ಶ್ವರನೆನಿಸಿ ಮೆರೆವೆನ್ನ ಹೊಂದುವನವನು ಕೇಳೆಂದ ॥ ೬ ॥

ನರನೆ ನೀನಾಪರಿಯೊಳೆನ್ನನೆ।
ಸ್ಮರಿಸು ಚಿತ್ತದೊಳೆನ್ನನೇ ಕು।
ಳ್ಳಿರಿಸು ನಿನ್ನ ಮನೋಮತಿಗಳನು ಮತ್ಪದಾಂಬುಜದಿ ॥
ಎರಗಿಸೇಳು ವಿರೋಧಿಗಳ ಸಂ।
ಹರಿಸು ಕೊಲೆಪಾತಕವ ಹೊದ್ದುವ।
ಹಿರಿದು ಭಯಬೇಡೆನ್ನಹೊದ್ದುವೆ ಕಡೆಗೆ ಸುಖಿಯಾಗಿ ॥ ೭ ॥

ಯೋಗಬಲದಿಂ ಮನವ ಚಂಚಲ ।
ವಾಗಗೊಡದತಿಭಕ್ತಿಯಲಿ ಸೊಗ ।
ವಾಗುವಂದದಿ ಪ್ರಾಣವಾಯುವನಿಲಿಸಿ ಕುಂಭಕದಿ ॥
ಆಗಮಜ್ಞನನಣುವಿನಿಂದಣು ।
ವಾಗಿಹನ ಶಾಸಕನ ಸಂಸ್ಮೃತಿ ।
ಸಾಗರೋತ್ತಾರಕನ ಚಿಂತಿಪುದಂತ್ಯಕಾಲದಲಿ ॥ ೮ ॥

ನೆನೆದರಿಂತವಸಾನಕಾಲದಿ ।
ದಿನಪತೇಜನ ದಿವ್ಯ ಪೂರುಷ ।
ನೆನುವ ಜಗತೀಧರನ ದಿವ್ಯ ಪದಸ್ಥರಹೆರವರು ॥
ಎನುವರಕ್ಷರವೆಂದು ಶ್ರುತಿಮಂ ।
ಡನರು ಯತಿಗಳು ಬಹ್ಮಚಾರ್ಯಾ ।
ಪ್ಯನಘರದನೇ ಬಯಸಿ ಸಾಹಸವಡುವರನುದಿನದಿ ॥ ೯ ॥

ಮೂಗು ಮುಂತಾದಿಂದ್ರಿಯಂಗಳ ।
ಬಾಗಿಲುಗಳನು ಮುಚ್ಚಿ ನೆತ್ತಿಯ ।
ಮೇಗೆನೆಲೆಗೆಯ್ದು ಸಿರಗಾಳಿಗೆ ಕಂಡಕಂಡೆಡೆಗೆ ॥
ಹೋಗದಂತೋಂಕಾರ ಮನನೋ ।
ದ್ಯೋಗವನು ಕೆಯ್ಗೊಳಿಸಿ ಮನಸಿಗೆ ।
ನೀಗಿ ದೇಹವ ನಿಂದವರು ಸದ್ಗತಿಯ ನೆಯ್ದುವರು ॥ ೧೦ ॥

ಅತ್ಯಧಿಕ ಪುಣ್ಯಾರ್ಜನೆಯೊಳಹೆ ।
ಸತ್ಯಲೋಕಾದಿಗಳ ಸುಖಗಳ ।
ನಿತ್ಯವಂತಾ ಪುಣ್ಯಫಲ ಪರಿಪೂರ್ಣವಾದೊಡನೆ ॥
ಮರ್ತ್ಯಲೋಕದಿ ಜನಿಸಿ ಪುನರಪಿ ।
ಮೃತ್ಯುಮುಖಕೀಡಪ್ಪರಿನ್ನಾ ।
ನಿತ್ಯವಹ ಪರಗತಿಯ ಪಡೆದರಿಗಾವ ಭಯವಿಲ್ಲ ॥ ೧೧ ॥

ತಿರುಗಿ ತಿರುಗೀ ನಾಲ್ಕುಯುಗದವ ।
ತರಣ ಸಾಸಿರ ಸೂಳುನಡೆದೊಡೆ ।
ಸರಸಿರುಹಸಂಭವನ ಹಗಲಾ ಹಗಲಹೊತ್ತಿನಲಿ ॥
ವರಮಹಾಭೂತಾದಿ ಸಚರಾ ।
ಚರಗಳೆಲ್ಲವು ಪುಟ್ಟಿತೋರುವು ।
ಇರುಳದೇ ಲೆಕ್ಕದವೊಲಹಸಮಯದಲಿ ಲಯವಹವು ॥ ೧೨ ॥

ತೋರಿಯಡಗುವವಿಂತಿವುಗಳಾ ।
ಧಾರವಪರ ಪ್ರಕೃತಿಯದರಿಂ ।
ದೂರವಿಹುದವ್ಯಕ್ತವಕ್ಷರವದು ಪರಂಧಾಮ ॥
ಮೀರಿಮಿಕ್ಕಿದ ಗತಿಗಳದರಿಂ ।
ಬೇರೆಮತ್ತೊಂದಿಲ್ಲವಿದನಿ ।
ನ್ನಾರುಹೊದ್ದುವರವರಿಗಿಲ್ಲೀಜನನ ಮರಣ ಭಯ ॥ ೧೩ ॥

ಪರಮಪೂರುಷನಾದವನೆ ನಾ ।
ನಿರಿಸಿ ಭೂತಾದಿಗಳನೆನ್ನೊಳು ।
ಹೆರಹುವವನಾಂ ಸುಲಭನಾಗಿಹೆನೇಕಭಕ್ತರಿಗೆ ॥
ಮರಣಹೊಂದಿದ ಕರ್ಮಯೋಗಿಗೆ ।
ಮರಳಿಮರುವುಟ್ಟಪ್ಪುದಿಲ್ಲೆಂ ।
ದರಿವಕಾಲವನಿನ್ನೊರೆವೆನೆಲೆ ಪಾರ್ಥಕೇಳೆಂದ ॥ ೧೪ ॥

ಉತ್ತರಾಯಣ ಮಾಸವಾರೊಳು ।
ಮತ್ತೆಶುಕ್ಲಜ್ಯೋತಿಶಿಖಿದಿನ ।
ವೆತ್ತು ಸತ್ತೊಡೆ ಜನಿಯಿಸರನಾವೃತ್ತಿ ಮಾರ್ಗವಿದು ॥
ಮತ್ತೆಯಾಮಿನಿ ಧೂಮಕೃಷ್ಣದಿ ।
ಸತ್ತೊಡಂತಾ ದಕ್ಷಿಣಾಯನ ।
ವೆತ್ತು ಸಂಜನಿಯಿಸುವರವರಾವೃತ್ತಿಮಾರ್ಗವಿದು ॥ ೧೫ ॥

ಸ್ಮೃತಿಗಳೆರಡಿಂತಿದರ ಮರ್ಮ ।
ಸ್ಥಿತಿಯನರಿದಿಹೆ ಯೋಗಯುಕ್ತರು ।
ವ್ರತತಪಸ್ವಾಧ್ಯಾಯ ದಾನಾಧ್ವರಗಳಿಂತೆಂಬ ॥
ಅತಿಶಯದಕರ್ಮಗಳಿಗೊದಗುವ ।
ಗತಿಗೆ ಮಿಕ್ಕಿದ ಪರಮಪದದು ।
ನ್ನತಿಯ ಕಾಂಬರು ಪಾರ್ಥನೀನಂತಾಗು ಯತ್ನದಲಿ ॥ ೧೬ ॥

ಚಿತ್ತವಿಟ್ಟನ್ನೊಂದ ತಿಳಿಯಾ ।
ವೃತ್ತಿಮಾರ್ಗದಿ ಜನಿಸುವರನಾ ।
ವೃತ್ತಿಮಾರ್ಗದಿ ಮಡಿಯೆ ಜನಿಸರು ಬ್ರಹ್ಮವಿದರೆಂದು ॥
ಉತ್ತಮೋತ್ತಮ ಮಂಗಲಶ್ರೀ ।
ಮತ್ತಕಾಶಿನಿಯರಸ ರಿಪುನೃಪ ।
ಮತ್ತವಾರಣ ಪಂಚಮುಖ ಪಾರ್ಥಂಗೆ ನಿರವಿಸಿದ ॥ ೧೭ ॥

—:o:—

## ೯ನೆಯ ಸಂಧಿ

ಸೂ || ರಾಜವಂಶಶಿಖಾಮಣಿಗೆ ಖಲ |
ರಾಜವಂಶಕುಠಾರನೊರೆದನು |
ರಾಜವಿದ್ಯಾರಾಜ ಗುಹ್ಯಸನಾಮ ಯೋಗವನು ||

ಒರೆವೆನನಸೂಯಾಪರನೆ ಕೇಳ್ |
ನರನೆ ಗುಹ್ಯಾದ್ಗುಹ್ಯತರವಹ |
ಪರತರಜ್ಞಾನವನು ವಿಜ್ಞಾನವನುಸಹಿತಾಗಿ ||
ಸ್ಥಿರತೆಯಿಂ ಕೇಳ್ದರಿದರಿದರಿಂ |
ಪಿರಿದುಮತ್ತೇನಾದರಿಹುದದ |
ನರಿಯಬೇಕೆಂಬಾಸೆಯಾಸರು ತಾನೆ ಹಿಂಗುವುದು || ೧ ||

ಇದುಪವಿತ್ರವಿದುತ್ತಮೋತ್ತಮ |
ವಿದು ಸುಲಭಮಾರ್ಗವಿದು ಬೋಧ |
ಪ್ರದವಿದೇ ಸದ್ಧರ್ಮವಿದು ವಿದ್ಯೆಗಳಹಿರಿಯರಸು ||
ಇವನರಿತುನಡೆಗೊಂಡೊಡವ್ಯಯ |
ಪದವಹುದು ಶ್ರದ್ಧಾತ್ಮನಲ್ಲದೊ |
ಳಿದರೊಳೊದಗದೆಮುಕ್ತಿ ಸಂಸೃತಿಪಥದಿ ಮರಳುವನು || ೨ ||

ಆವರಿಸಿ ಕೊಂಡೀತೆರದ ಲೋ |
ಕಾವಳಿಯನವ್ಯಕ್ತರೂಪದೊ |
ಳಾವಗಂ ಪರಿಪೂರ್ಣನಾಗಿಹೆನಿನಿತು ಲೋಕದಲಿ ||
ಆವುದೆಲ್ಲವದೆನ್ನೊಳಿಹುದಾ |
ನಾವುದೊಂದರೊಳಿಲ್ಲವೀಭೂ |
ತಾವಳಿಗಳಿಹವೆನ್ನೊಳಂತಾನವುಗಳೊಳಗಿಲ್ಲ || ೩ ||

ಆನಖಿಳಭೂತಾತ್ಮ ಭೂತನಿ ।
ದಾನನಾದರು ಭೂತಸಂಘದೊ ।
ಳಾನುಸೇರ್ದವನಲ್ಲ ಮತ್ತಾನವುಗಳೊಡನಿಲ್ಲ ॥
ತಾನೆ ಬಾನೊಳು ಸಂಚರಿಪ ಪವ ।
ಮಾನನಂತಾ ಭೂತಸಂಚಯು ।
ಮಾನಕಳವಡದನಿತುನಿಂದೆಡೆಗೊಳುವುದೆನ್ನೊಳಗೆ ॥ ೪ ॥

ಇಂತಿದೆಲ್ಲವನಳಿಸುವೆನು ಕ ।
ಲ್ಪಾಂತದಲಿ ಪುಟ್ಟಿಸುವೆನಿದನಿ ।
ದ್ದಂತೆಪೋಲಾನೆನ್ನ ಮಾಯಾಬಲದೊಳಾದಿಯಲಿ ॥
ಎಂತು ಗೆಯ್ದಿನ್ನೇನನೆಸಗಲ ।
ನಂತ ಕಾರ್ಯಗಳಿರಲಿ ಕರ್ಮದ ।
ಸಂತೆಯಲಿ ವ್ಯಾಪಾರವೆನಗಿಲ್ಲೆಂದನಸುರಾರಿ ॥ ೫ ॥

ನೋಡಿ ಮಾನುಷ ದೇಹಧಾರಿಯ ।
ನಾಡಿಯಪಮಾನಿಸುವರಲ್ಲದೆ ।
ಮೂಢರರಿಯರು ಸಕಲ ಭೂತೇಶ್ವರನೆ ನಾನೆಂದು ॥
ಆಡಿದೆಲ್ಲವು ವ್ಯರ್ಥವವರದು ।
ಮಾಡಿದೆಲ್ಲ ನಿರರ್ಥಕವು ತಿಳಿ ।
ಗೇಡಿಗರಲಾ ಪಾರ್ಥ ಚಿತ್ತಭ್ರಷ್ಟರವರೆಂದ ॥ ೬ ॥

ಆಸುರೀ ಮತಿಮಿಲಿತರವರ ।
ಭ್ಯಾಸ ವೃತ್ತಿಗಳಿಂತು ದುರಿತಾ ।
ವಾಸಕೆಡೆಯಾಗಿಹವು ದೈವೀಮತಿ ವಿಭೂಷಿತರು ॥
ಗಾಸಿಗೊಳದವ್ಯಕ್ತನವ್ಯಯ ।
ನೀ ಸಕಲಭೂತಾದಿ ಭುವನವಿ ।
ಲಾಸಿನಾನೆಂದೆನ್ನನೊಂದೇ ಮನದಿ ಭಜಿಸುವರು ॥ ೭ ॥

ಗಾಢಬದ್ಧವ್ರತರು ಯತ್ನವ ।
ಮಾಡಿನೋಳ್ಪರು ನಿತ್ಯಯುಕ್ತರು ।
ಕೂಡಿ ಕೀರ್ತಿಸಿ ನಮಿಸಿ ಕೊಂಡಾಡುವರು ಭಕ್ತಿಯಲಿ ॥
ಪಾಡರಿತ ಕೆಲರೆನ್ನನಂತ ।
ಗೂಢಪರ ಚೈತನ್ಯನೆಂದೇ ।
ನೋಡಿಮನದೊಳ್ ಜ್ಞಾನಯಜ್ಞದಿಯಜಿಸುತಿಹರೆಂದ ॥ ೮ ॥

ಭೇದವೆಣಿಸದೆ ಸರ್ವತೋಮುಖ ।
ನಾದ ಮಹಿಮನನೇಕ ಮುಖದಿಂ ।
ದಾದಿರೂಪನನರಿತು ಬಹುವಿಧರೂಪನಿವನೆಂದು ॥
ಸಾಧಕರು ಪೂಜಿಸುವರೆನ್ನನು ।
ಸಾಧಿತಾಂತಃಕರಣರವರೆಂ ।
ತಾದರೆನ್ನನೆ ಹೊದ್ದುವರು ಸಂದೇಹವಿಲ್ಲಿದಕೆ ॥ ೯ ॥

ಶ್ರುತಿವಿಹಿತ ಕ್ರತುವೆಂದೊಡಾನಾ ।
ಹುತಿಯದಾನೌಷಧವದಾನ್ನೈ ।
ಸ್ಮೃತಿ ವಿದಿತವರಯಜ್ಞವಾನಾಜ್ಯಸ್ವಧಾದಿಗಳು ॥
ಮತಿಯುತನೆನಾಂ ಸರ್ವಲೋಕ ।
ಸ್ಥಿತಿಯು ಮಾತಾ ಪಿತೃ ಪಿತಾಮಹ ।
ಗತಿಯುದೆಲ್ಲವು ನಾನು, ವೇದ್ಯನು ನಾನು, ನಾಂಧಾತಾ ॥ ೧೦ ॥

ಇತ್ತಕೇಳ್ಳೈ ಫಲುಗುಣನೆ ಸದ ।
ಸತ್ತುಗಳವಾಂ ಸಕಲಲೋಕೋ ।
ತ್ಪತ್ತಿ ವಿಲಯಸ್ಥಾನವಾನೋಂಕಾರವೆನಲಾನು ॥
ಮತ್ತೆವೇದತ್ರಿತಯವೆನಲಾ ।
ನುತ್ತಮೋತ್ತಮ ಕರ್ಮಸಾಕ್ಷಿಯೆ ।
ನುತ್ತಪೇಳಿದೊಡಾನು ಪೋಷಕನಾನು ಸಖನಾನು ॥ ೧೧ ॥

ಶರಣ ನಾನು ನಿವಾಸವಾನೆಲೆ ।
ಮರಣವಮೃತವದಾನು ವಿಶ್ವಂ ।
ಭರನುನಾನವ್ಯಯದ ಪರತರ ಬೀಜವಾನೆಂದ ॥
ಸುರಿಸದಿರುವವ ನಾನು ಮಳೆಯನು ।
ಸುರಿಸುವವನಾನೆಂಟು ದೆಸೆಯಲಿ ।
ಬಿರುಬಿಸಿಲ ಬಿತ್ತರಿಸುವವ ನಾನೆಂಬುದರಿಯೆಂದ ॥ ೧೨ ॥

ಮೂರುವೇದಂಗಳಿಗೆ ಮೆಚ್ಚುಗೆ ।
ದೋರುವಂದದಿ ಯಜ್ಞಕರ್ಮವ ।
ಪೂರಯಿಸಿ ಪುಣ್ಯವನು ಪಡೆದಿಹ ಸೋಮಪಾಯಿಗಳು ॥
ಸೇರಿಸ್ವರ್ಗವನಲ್ಲಿ ಸೌಖ್ಯದ ।
ಸಾರವನು ಸವಿದುಂಡು ಬರಿಗೈ ।
ಯೂರಿ ಧರೆಗುರುಳುವರು ಗಳಿಸಿದ ಪುಣ್ಯತೀರ್ದೊಡನೆ ॥ ೧೩ ॥

ಬಗೆಬಗೆಯ ದೇವರ್ಕಳೆಂಬೀ ।
ನಗೆಯ ನುಡಿಯಿಂ ಬೆಗಡುಗೊಳ್ಳದೆ ।
ಜಗತಿಗೋರ್ವನೆ ದೇವನಾನೆಂದೆನ್ನನನುದಿನದಿ ॥
ಬಗೆದುಪಾಸಿಸುವನ್ಯಚಿಂತನೆ ।
ಬಗೆವೃಗದ ಸಜ್ಜನರ ಮೋಕ್ಷಾ ।
ರ್ಥಿಗಳ ಯೋಗಕ್ಷೇಮವೆನ್ನದು ಪಾರ್ಥಕೇಳೆಂದ ॥ ೧೪ ॥

ನಿಜಗತಿಯನಿಂತೆಂದು ತಿಳಿಯದೆ ।
ಭಜಿಸುವರು ಕೆಲರನ್ಯದೈವ ।
ವ್ರಜವನಾದರು ಸಲುವುವೆನಗಾ ಯಜನ ಕರ್ಮಗಳು ॥
ಸೃಜಿಸಿದವನಾಂ ಯಜ್ಞವನು ಕ್ರತು ।
ಭುಜನು ನಾನಿದ್ದಂತೆ ಮತ್ತಾ ।
ಭಜಕರಾರೆಂದೆನ್ನಸರಿಯದೆ ಬರಿದೆ ಬಳಲುವರು ॥ ೧೫ ॥

ವಾಸವಾತ್ಮಜ ಕೇಳು ಪಿತೃಗಳು ।
ಪಾಸಕರು ಪಿತೃಗಳನು ಭೂತೋ ।
ಪಾಸಕರು ಭೂತಂಗಳನು ಹೊದ್ದುವರು ದೈವಗಳ ॥
ವಾಸದೊಡನವುಗಳನು ದೈವೋ ।
ಪಾಸಕರು ಹೊದ್ದುವರು ಸೌಖ್ಯಾ ।
ವಾಸನೆನ್ನನುಪಾಸಿಸುವರೆನ್ನುವನೆ ಹೊದ್ದುವರು ॥ ೧೬ ॥

ಒಡನೆ ವಸ್ತೂತ್ಕರಗಳರ್ಪಿಸು ।
ವೊಡೆ ಕಡಮೆ ಹೆಚ್ಚೆಂಬ ಶಂಕೆಯ ।
ತೊಡೆದ ಚಿತ್ತದ ಯೋಗಯುಕ್ತರು ಭಕ್ತಿಯಿಂದೀವ ॥
ಮಿಡಿಯದೇನೆಲೆಯೇನು ಪೂವೇ ।
ನುಡಿದಹಣ್ಣೆಂದೇನು ಕಡೆಗೊ ।
ಕ್ಕುಡಿತೆ ನೀರೇಸಾಕು ಸಂತಸಪಡುವೆನದರಿಂದ ॥ ೧೭ ॥

ಉಂಬುದೇವೊದಲಾದ ಜೀವನ ।
ದಿಂಬ ದಾನ ತಪಸ್ಸು ಹೋಮುಗ ।
ಳೆಂಬನಾನಾವಿಧದ ಕರ್ಮಾದಿಗಳನೆನಗಾಗಿ ॥
ತುಂಬಿದಾನಂದದಿ ಸಮರ್ಪಿಸಿ ।
ನಂಬಿ ನಿಲುವಗೆ ಕರ್ಮಬಂಧಗ ।
ಳೆಂಬ ಕತ್ತಲೆ ಸೆರೆವನೆಯ ಸೇರಿಕೆಯ ಭಯವಿರದು ॥ ೧೮ ॥

ಎನ್ನ ಭಜಿಸುವ ಭಕ್ತಿಗುಣಸಂ ।
ಪನ್ನರಾರಾನವರೊಳಿಹೆನವ ।
ರೆನ್ನೊಳಿಹರಿಂತಲ್ಲದೆಲ್ಲರು ಸಮರೆನಗೆ ನೆಲದಿ ॥
ಭಿನ್ನ ಭಾವನೆಯಳಿದು ಮನದೊಳ ।
ಗೆನ್ನನೇ ನೆನೆವಧಮನಾದರು ।
ಮನ್ನಣೆಯ ಪಡೆದಪನು ದಿನದಿಂದಿನಕೆ ಮೇಲೈದಿ ॥ ೧೯ ॥

ಪಾದಜಸ್ತ್ರೀವೈಶ್ಯರಂತ್ಯಜ ।
ರಾದವರು ಮೊದಲಾಗಿ ಪಡೆವರು ।
ಸಾಧಿಸುವಡರಿದೆಂಬ ಪದವನು ಪರಮ ಭಕ್ತಿಯಲಿ ॥
ಸಾಧಕರಲಾ ಬ್ರಹ್ಮಬಾಹುಜ ।
ರಾದವರು ಮತ್ತವರ ಮಾತೇ ।
ಕಾದರದಿ ನೀನೆನ್ನ ಭಜಿಸದರಿಂ ಧನಂಜಯನೇ ॥ ೨೦ ॥

ಅಸುಖವಿಂತಿದನಿತ್ಯವಿಂತೀ ।
ರಸೆಯ ಬದುಕದಕೆನ್ನನೇ ಪೂ ।
ಜಿಸು ನಮಿಸು ಭಜಿಸೆನ್ನನೊಂದೇಮನದಿ ಕೊಂಡಾಡು ॥
ಸುಸುಖಿಯಹೆಯ್ಯೈ ಪಾರ್ಥ ಭಕ್ತಿಯ ।
ಬೆಸುಗೆಗಿಡದಂತೆಚ್ಚರಿರಲೆಂ ।
ದಸುರಮರ್ದನ ಮಂಗಲಶ್ರೀಯರಸ ನಿರವಿಸಿದ ॥ ೨೧ ॥



## ೧೦ನೆಯ ಸಂಧಿ

ದೇವಕೀಸಂಜಾತ ದೇವರ ।
ದೇವನತಿ ಕರುಣದಲಿ ಕುಂತೀ ।
ದೇವಿಯಣುಗಂಗೊರೆದನಮಲ ವಿಭೂತಿಯೋಗವನು ॥

ಪರಮವಾಕ್ಯವಿದೊಂದನಾನಿನ ।
ಗರುಹಿದಪೆನೆಲೆ ಪಾರ್ಥಕೇಳ್ಳೈ ।
ಪರಮಋಷಿಗಳು ಸುರರುಸಹಿತಿನ್ನಾನದಾರೆಂದು ॥
ಅರಿಯರವರುದ್ಭವಕೆ ಕಾರಣ ।
ವರಿಯಲೆನ್ನಿಂದಾಯ್ತು ಲೋಕದೊ ।
ಳೊರೆವರೆನ್ನನನಾದಿಯೆಂದಜನೆಂದು ಬಲ್ಲವರು ॥ ೧ ॥

ಸಕಲಜಗತೀಧರನನಧಿನಾ ।
ಯಕನನಿಂತರಿದವರು ನಿರ್ಬಾ ।
ಧಕರೆನಿಸಿ ನಿರ್ಧೂತಪಾತಕರಾಗಿ ಬಾಳುವರು ॥
ಸುಕರ ದುಷ್ಕರವೆಂಬ ಭಾವ ।
ಪ್ರಕರವಿಂತೀ ಪ್ರಾಣಿಮಾತ್ರದಿ ।
ಪ್ರಕಟವಹುದದನಿನ್ನೊರೆವೆನವಧರಿಸು ನೀನೆಂದ ॥ ೨ ॥

ಶಮ ಭಯಾಪಯಶಸ್ಸು ನಿರ್ಭಯ ।
ಸಮತೆ ಸತ್ಯ ಯಶಸ್ಸು ವಿತರಣ ।
ದಮ ತಪಸ್ಸಂತುಷ್ಟಿ ಬುದ್ಧಿ ಜ್ಞಾನ ಸುಖದುಃಖ ॥
ಕ್ಷಮೆ ವಿಗತಮೋಹತ್ವವಿಂತೀ ।
ಕ್ರಮದ ಭಾವಗಳೊಗೆದವೆನ್ನಿಂ ।
ಪ್ರಮುಖರೊಗೆದರು ನಾಲ್ವರೇಳ್ವರು ಋಷಿವರರುಸಹಿತ ॥ ೩ ॥

ಮನುಗಳೊಗೆದರು ಮನಸಿನಿಂ ಸಂ।
ಜನನವಾಯ್ತುವರಿಂ ಪ್ರಜಾಜನ।
ವಿನಿತಿದೆನ್ನ ವಿಭೂತಿಯೋಗವಿದರಿಕೆಯಾದುದೆನೆ ॥
ಮನದ ಸಂಶಯವಳಿದು ಯೋಗದೊ।
ಳನುಗೊಳುವುದಾಸ್ಥಿರತೆ ಮಿಕ್ಕಿನ।
ನೆನಹು ತನ್ನಿಂತಾನೆ ಹಿಂಗುವುದರ್ಜುನನೆ ತಿಳಿಯು ॥ ೪ ॥

ಜಾಣರೀಸಚರಾಚರದ ನಿ
ರ್ಮಾಣವೆನ್ನಿಂದಾಯ್ತಿದೆಲ್ಲವು।
ಕಾಣಿಸುವುದೆನ್ನಿಂದಲೆಂಬೀ ಭಾವಶುದ್ಧಿಯಲಿ ॥
ಪ್ರಾಣಮುಂತಾದವರ ಸರ್ವವ।
ಕಾಣಿಕೆಯನಿತ್ತೆರಗಿ ನುತಿಸಿ ಪು।
ರಾಣ ಪೂರುಷನೆನ್ನನನುದಿನ ಭಜಿಸಿಸುಖಿಸುವರು ॥ ೫ ॥

ಅವರ ಮರವೆಯೆನಿಪ್ಪ ಕತ್ತಲು।
ಗವಿದಿರುವ ಹೃದಯಾಂತರಾಳದ।
ಭವನವನು ತಿಳಿವೆಂಬ ದಿವ್ಯಜ್ಯೋತಿಯಿಂ ಬೆಳಗಿ ॥
ಭುವನನುತನಪ್ಪೆನ್ನನೇ ಕೂ।
ಡುವ ಮಹಾಮಾರ್ಗದಲಿ ನಡೆವಂ।
ತವರ ಬುದ್ಧಿಯ ಭಾವವಂಪ್ರೇರಿಸುವೆ ನಾನೆಂದ ॥ ೬ ॥

ಶರಣಜನವತ್ಸಲನೆ ನಿನ್ನನು।
ಪರಮಪಾವನಮೂರ್ತಿ ಶಾಶ್ವತ।
ಪುರುಷ ನಿತ್ಯಾನಂದ ನಿಜ ಪರಿಪೂರ್ಣ ಪರಮಾತ್ಮ ॥
ಪರಮಗತಿ ವಿಭುವೆಂದು ದೇವಲ।
ಸುರಮಹಾಮುನಿ ವ್ಯಾಸಮುಂತಾ।
ಗಿರುವ ಸರ್ವಋಷೀಶ್ವರರು ನಿಶ್ಚಯಿಸಿ ಪೇಳುವರು ॥ ೭ ॥

ಒರೆವೆನೀನಂತದನು ದಿಟವೆಂ ।
ದರಿದೆನೆಲೆ ಕೇಶವನೆ ನಿನ್ನುಮ ।
ನರಿತವನುನೀಸಲ್ಲದನ್ಯರದಾರು ಲೋಕದಲಿ ॥
ಪರಮ ಪುರುಷನೆ ಸರ್ವಭೂತೇ ।
ಶ್ವರನೆ ದೇವರದೇವನೇ ನಿ ।
ನ್ನಿರವನರಿವವರುಂಟೆ ದಾನವ ದೇವ ಮರ್ತ್ಯರಲಿ ॥ ೮ ॥

ಆವನಿನ್ನ ವಿಭೂತಿಗಳು ಲೋ
ಕಾವಳಿಯನಾಶ್ರಯಿಸಿ ನಿಂದಿಹ ।
ವಾ ವಿಭೂತಿಗಳಾವುವಾನವುಗಳನು ನಿತ್ಯದಲಿ ॥
ಆವಭಾವನೆಯಿಂದ ಕಂಡಿ ।
ನ್ನಾವ ಪರಿಯಲಿ ನಿನ್ನಚಿಂತಿಪು ।
ದೀ ವಿವರವೆಲ್ಲವನು ವಿಸ್ತರವಾಗಿ ತಿಳುಹಿನ್ನು ॥ ೯ ॥

ಕೇಶವನೆ ಕೇಳಿನ್ನಮನದಭಿ ।
ಲಾಷೆಯಡಗದೆ ತವವಚಃ ಪೀ ।
ಯೂಷವನು ಕಿವಿಯಾರೆ ಕುಡಿಕುಡಿದನಿತುಬೇಕೆಂಬ ॥
ಆಶೆಹೆಚ್ಚುವುದದಕೆನಗೆ ಸಂ ।
ತೋಷಚಿತ್ತದೊಳೊರೆಯವೇಳ್ಕುವಿ ।
ಶೇಷತರವಾಗಿರುವ ನಿನ್ನ ವಿಭೂತಿಯೋಗವನು ॥ ೧೦ ॥

ಲೇಸನಾಡಿದೆ ಕುರುಕುಲಜ ಕೇ ।
ಳಾಸಮಸ್ತ ವಿಭೂತಿಗಳನಿ ।
ನ್ನೇಸು ಪೇಳ್ದರು ಪೇಳಿತೀರಿಸಲರಿದನಂತವವು ॥
ಆಸುಭೂತಿಗಳೊಳಗೆ ಮುಖ್ಯವ ।
ದೇಸದೆಲ್ಲವನೊರೆವೆ ನಿನ್ನೆದೆ ।
ಯಾಸರಡಗುವ ತೆರದೊಳವಧರಿಸೆಂದನಸುರಾರಿ ॥ ೧೧ ॥

ಆದರದಿಕೇಳ್ಸರ್ವಭೂತಗ ।
ಳಾದಿ ಮಧ್ಯಾಂತಂಗಳಾನಂ ।
ತಾದ ಭೂತಗಳಂತರಾತ್ಮನದಾನು ಪೇಳುವೊಡೆ ॥
ದ್ವಾದಶಾದಿತ್ಯರೊಳು ವಿಷ್ಣುವು ।
ವೇದನಿಚಯದಿಸಾಮವೀಖರ ।
ದೀಧಿತಿಯು ಪರಿಪೂರ್ಣಕಿರಣಜ್ಯೋತಿಗಳೊಳಾನು ॥ ೧೨ ॥

ಪರಮರುದ್ಗಣದೊಳು ಮರೀಚಿಯು ।
ಮೆರೆವತಾರಾಗಣದೊಳಬ್ಜನು ।
ಸುರರೊಳಿಂದ್ರನು ಕೂಡಿದಿಂದ್ರಿಯಗಳೊಳು ಮನವಾನು ॥
ಪರಿಪರಿಯ ಪ್ರಾಣಿಗಳೊಳಿಹಚ ।
ಚ್ಚರದ ಚೇತನವಾನು ನಾಂಶಂ ।
ಕರನು ರುದ್ರರೊಳಾನು ರಕ್ಷೋಗಣದಿ ಧನಪತಿಯು ॥ ೧೩ ॥

ವಸುಗಳಲಿ ನಾನಗ್ನಿಯಾಂಗೀ ।
ರಸನು ನಾನು ಪುರೋಹಿತರ್ಕಳ ।
ವಿಸರದಲಿ ಸುರಗಿರಿಯದಾನು ಸಮಸ್ತಗಿರಿಗಳಲಿ ॥
ಅಸಮ ಸೇನಾನಾಯಕರ್ಕಳ ।
ಪಸರದಲಿ ಶಿಖಿವಾಹನಾಂಕಂ ।
ಗೆಸೆವಸಾಗರ ನಾನು ಸರ್ವಸರೋವರಂಗಳಲಿ ॥ ೧೪ ॥

ವಚನಗಳೊಳೋಂಕಾರ ನಾಂಋಷಿ ।
ನಿಚಯದೊಳು ಭೃಗುಋಷಿಯು ನಾಂಮೇ ।
ಣಚಲವಾದವುಗಳೊಳು ತುಹಿನಾಚಲವದೆನಲಾನು ॥
ಉಚಿತವೆನಿಸುವ ಯಜ್ಞಯಾಗ ।
ಪ್ರಚಯದೊಳು ಜಪಯಜ್ಞನಾನೈ ।
ಖಚರರಹೆ ಗಂಧರ್ವರೊಳು ನಾಂ ಚೈತ್ರರಥನೆಂದ ॥ ೧೫ ॥

ಸುರಋಷಿಗಳೊಳುನಾರದನು ಸಿ।
ದ್ಧರೊಳು ಕಪಿಲನು ನಾನು, ನರರೊಳು।
ನರಪತಿಯುನಾಂ, ವೃಕ್ಷಗಳೊಳಶ್ವತ್ಥವೆನಲಾನು ॥
ತುರಗಗಳೊಳುಚ್ಚೈಶ್ರವವು ವರ।
ಕರಿಗಳೊಳಗೈರಾವತವುನಾಂ।
ತುರುಗಳೊಳು ನಾಂ ಕಾಮಧೇನುವು ಪಾರ್ಥಕೇಳೆಂದ ॥ ೧೬ ॥

ಯಾದಸರೊಳಾಂ ವರುಣನಿನ್ನು।
ತ್ಪಾದಕರೊಳಾಂ ದರ್ಪಕನು ಕಾ।
ಕೋದರಾಳಿಗಳೊಳಗೆ ವಾಸುಕಿಯಾನು ಸಿಟ್ಟಿಯಲಿ ॥
ಆದಸರ್ವಸ್ವಕೆ ನಿಯಾಮಕ।
ರಾದರೊಳು ಯಮನಾನು ನಾಂ ಶ್ರುತ।
ನಾದನಂತನು ನಾಗಗಳೊಳರ್ಯಮನು ಪಿತೃಗಳೊಳು ॥ ೧೭ ॥

ಆಯುಧಗಳೊಳಗಾನು ವರವ।
ಜ್ರಾಯುಧವು, ಪ್ರಹ್ಲಾದನಾಂ ದೈ
ತೇಯರೊಳು, ಭಕ್ಷಕರೊಳಾನೇ ಕಾಲನಾಗಿಹೆನು ॥
ವಾಯುವೈ ವೇಗಿಗಳೊಳಾಂ, ಧೃತ।
ಸಾಯಕರೊಳಾಂ ರಾಮನೈ, ಮೃಗ।
ರಾಯನಾಂ ಮೃಗಗಳೊಳು ಜಲಚರಗಳೊಳು ನಾಂ ಮಕರ ॥ ೧೮ ॥

ವಾದಿಸುವ ವಾದಿಗಳ ನಿಜಸಂ।
ವಾದವಾನೆಲೆ ಪಾರ್ಥ ಗಂಗಾ।
ಹ್ರಾದಿನಿಯೆನಲ್ಕಾನು ಸರ್ವನದೀನದಂಗಳೊಳು ॥
ಆದಿ ಮಧ್ಯಾಂತಂಗಳಿಂತೆಂ।
ದಾದ ಸೃಷ್ಟಿಯದಾನು ವಿದ್ಯೆಯ।
ಹಾದಿಯೊಳಗಧ್ಯಾತ್ಮವಿದ್ಯೆಯದೆಂದೊಡಾನೆಂದ ॥ ೧೯ ॥

ಅಕ್ಕರಂಗಳೊಳಾನಕಾರವು ।
ಹಕ್ಕಿಗಳೊಳಾಂ ವೈನತೇಯನು ।
ದಿಕ್ಕುದಿಕ್ಕಿಗೆ ಮೊಗಗಳುಳ್ಳವನಾಂ ಚತುರ್ಮುಖನು ॥
ಮುಕ್ಕಿಮುರಿದೀಡಾಡಿ ಸರ್ವವ ।
ನಿಕ್ಕಿನಿಲ್ಲುವ ಮೃತ್ಯು ನಾಂ ಜನ ।
ನಕ್ಕೆವರ್ಪರ ಜನಕ, ನಾನು ಸಮಾಸದೊಳು ದ್ವಂದ್ವ ॥ ೨೦ ॥

ಸತಿಯರೊಳ್ ಶ್ರೀ ಕೀರ್ತಿ ಸಂಸ್ಮೃತಿ ।
ಧೃತಿ ವಚನ ಮೇಧಾ ಕ್ಷಮಾದ್ಯ ।
ನ್ನತಗುಣಗಳಾನಾನು ಸಾಮಗಳಲಿ ಬೃಹತ್ಸಾಮ ॥
ಋತುಗಳೊಳಗೆ ವಸಂತ ಛಂದೋ ।
ವಿತತಿಯೊಳು ಗಾಯತ್ರಿ ಮಾಸ ।
ಪ್ರತತಿಯೊಳಗಾ ಮಾರ್ಗಶೀರ್ಷವು ನಾನೆ ಕೇಳೆಂದ ॥ ೨೧ ॥

ನರನೆ ವಿಜಯದ ನಿಶ್ಚಯದ ಪುರು ।
ಷರವಿಜಯನಿಶ್ಚಯವದಾನೀ ।
ಧರೆಗೆ ವಂಚಕರೊಳಗೆ ನಾನೇದ್ಯೂತವೆಂದರಿಯ ॥
ಭರಿತಸತ್ವರ ಸತ್ವ ನಾನೆಂ ।
ದರಿತುಕೊಳ್ಳೈ ಯಾದವರವರ ।
ನೆರವಿಯೊಳಗಾಂ ವಾಸುದೇವನೆನುತ್ತ ತಿಳಿಯೆಂದ ॥ ೨೨ ॥

ದಂಡವೈ ದಮಯುತರೊಳಾಂ ಕವಿ ।
ಮಂಡಲದೊಳಾಂ ಶುಕ್ರನೈ ಮುನಿ ।
ತಂಡದೊಳಗಾಂ ವ್ಯಾಸನೈಯಾಂಗುಪ್ತದೊಳುಮಾನ ॥
ಪಾಂಡವರೊಳು ಧನಂಜಯನು ಕೈ ।
ಗೊಂಡ ಕಾರ್ಯದಿ ಜಯವ ಬಯಸುವ ।
ಪಂಡಿತರೊಳಿಹ ನೀತಿಯಾನೆಂದರಿತು ಕೊಳ್ಳೆಂದ ॥ ೨೩ ॥

ಜ್ಞಾನಿಗಳ ಸುಜ್ಞಾನವೆಂದನ ।
ಲಾನು ಭೂತಸ್ತೋಮ ಬೀಜವ ।
ದಾನು ಮಿಕ್ಕಚರಾಚರಗಳೇನಿಪ್ಪವವುಗಳಿಗೆ ॥
ಆನು ಹೊರಗಲ್ಲಿದನು ನಿನ್ನನು ।
ಮಾನವಳಿಯಲೆನುತ್ತ ಪೇಳಿದೆ ।
ಮಾನನಿಧಿ ಮಿಕ್ಕುಳಿದುದನು ಪೇಳುವೊಡನಂತವವು ॥ ೨೪ ॥

ಇನ್ನುಲಕ್ಷ್ಮೀಕರವದೆಲ್ಲಿಹು ।
ದಿನ್ನು ವೈಭವವೆಲ್ಲಿಹುದು ಮ ।
ತ್ತಿನ್ನು ನಿಜಸತ್ವಪ್ರಭಾವವದೆಲ್ಲಿ ತಾನಿಹುದು ॥
ಇನ್ನದಿಲ್ಲಿಹುದೆಂಬುದೆಲ್ಲವ ।
ದೆನ್ನ ತೇಜೋಂಶಂಗಳಿಂದು ।
ತ್ಪನ್ನವಾಗಿಹುದೆಂದು ತಿಳಿಯಾ ಪಾರ್ಥನೀನೆಂದ ॥ ೨೫ ॥

ಆವ ಭಾಗ್ಯವ ವೈಭವಶ್ರೀ ।
ದೇವಿ ಕಾಣಿಪಳವುಗಳಾವಿ ॥
ರ್ಭಾವವೆನ್ನ ವಿಭೂತಿಗಳ ಸತ್ವಂಗಳಿಂದಹವು ॥
ಆವರಿಸಿ ಮಿಕ್ಕಿಹೆನು ನಾಂ ಲೋ ।
ಕಾವಳಿಯನೆನ್ನಂಶಮಾತ್ರದೊ ।
ಳೀವಿಚಾರವನರಿಯೆ ಬೇರೇಂಬೇಕೆ ಹೇಳೆಂದ ॥ ೨೬ ॥

ಶರಣಜನ ಭಯಹರಣ ಭಕ್ತೋ ।
ದ್ಧರಣ ಬಹಿರಾವರಣ ಸನ್ನುತ ।
ಚರಣನಾ ಫಲುಗುಣನ ಕೇಳಿದೊಡುಚಿತ ವಚನದಲಿ ॥
ಪರಮಭಕ್ತಿಯೊಳೆರಗಿ ಕೈಮುಗಿ ।
ದೊರೆದನಿಂತೆಲೆ ಮಂಗಲಶ್ರೀ ।
ವರನೆ ಲಾಲಿಸೆನುತ್ತ ಮಣಿದು ವಿನೀತ ಭಾವದಲಿ ॥ ೨೭ ॥



## ೧೧ನೆಯ ಸಂಧಿ

ಸೂ ॥ ವಿಶ್ವವಂದ್ಯವರೇಣ್ಯನಾ ಶ್ವೇ ।
ತಾಶ್ವವಾಹನಗೊಲಿದು ತನ್ನಯ ।
ವಿಶ್ವರೂಪವ ತೋರಿ ಮೆರೆದನು ವಿವಿಧಲೀಲೆಗಳ ॥

ಸರಸಿಜೇಕ್ಷಣ ಕೇಳು ಪರಮಾ ।
ದರದೊಳೆನ್ನನನುಗ್ರಹಿಸಿ ಬಿ ।
ತ್ತರಿಸಿವೇಳ್ದಧ್ಯಾತ್ಮಶಾಸ್ತ್ರ ರಹಸ್ಯವೆಲ್ಲವನು ॥
ಅರಿದೆನದರಿಂದೆನ್ನ ಚಿತ್ತದ ।
ಮರವೆಗತ್ತಲೆ ಹರಿದು ತಿಳಿವಿನ ।
ಕಿರುವೆಳಗು ಪಸರಿಸಿತು ಬೆಳಗಿತ್ತೊಳಗು ಬೆಮೆಯಳಿದು ॥ ೧ ॥

ತಿಳಿದೆ ತವಮಾಹಾತ್ಮ್ಯವನು ನಾ ।
ನಳಿವುಳಿವ ಭೂತಗಳ ಬಗೆಯನು ।
ತಿಳಿದೆನಕ್ಷಯವೆಂದೆನಿಪ ನಿನ್ನಾತ್ಮವರ್ಣನೆಯ ॥
ತಿಳಿದೆನೆಲೆ ದೇವೇಶ ಮನ್ಮನ ।
ದೊಳಗೊಳಗೆ ನಿನ್ನಾತ್ಮರೂಪವ ।
ನಳುಕದೀಕಣ್ಣಿನಲಿ ಕಾಂಬೊಂದಾಸೆ ಪಿರಿದಾಯ್ತು ॥ ೨ ॥

ಕಾಣಲಾಪೆನೆ ದೇವಹೇಳಾ ।
ತ್ರಾಣವಿನಿತೇನಾದರೆನ್ನೊಳು ।
ಕಾಣಿಸುವುದೇ ಕಂಡೊಡೆನಗಾ ದಿವ್ಯರೂಪವನು ॥
ಕಾಣಿಸುವುದೆಂತಾದರಿನ್ನು ಪು ।
ರಾಣ ಪುರುಷನೆ ನಿನ್ನನಾಪರಿ ।
ಕಾಣದಾತುರ ಮಾಣದೆಲೆ ಯೋಗೇಶ್ವರನೆ ವಿಭುವೆ ॥ ೩ ॥

ಒಳ್ಳಿತಾಯ್ತಭಿಲಾಷೆ ನಿನಗಿನಿ ।
ತುಳ್ಳುದಾದೊಡದಾಗದೆಂಬೀ ।
ಸುಳ್ಳನೆನುವೆನೆ ಪಾರ್ಥ ಕೇಳೆನ್ನಾತ್ಮರೂಪವನೆ ॥
ಉಳ್ಳ ಬಹುವಿಧರೂಪುವರ್ಣದ ।
ಬಳ್ಳಿ ಬಳವರಿದಂತೆವೊಲು ಬಗೆ ।
ಗೊಳ್ಳಲೆಡೆಗೊಳದಧಿಕ ಭೀಕರರೂಪವದು ನೋಡೆ ॥ ೪ ॥

ವರ ಮರುದ್ವಸು ರುದ್ರರಾದಿ ।
ತ್ಯರುಗಳಗಣಿತ ಲೋಕಗಳು ಕಂ ।
ಡರಿಯದಾಶ್ಚರ್ಯಗಳು ನಾನಾ ಭೂತನಿಕರಗಳು ॥
ಇರುವುವದರೊಳಗದನು ನಿನ್ನೀ ।
ಬರಿಯಕಣ್ಣಿಂಕಾಂಬೆನೆಂದೆಂ ।
ಬರಿಮರುಳ್ತನ ಬೇಡ ತೇಜೋಭರಿತ ರೂಪವದು ॥ ೫ ॥

ಅದಕಿದೋ ಸುಜ್ಞಾನದೃಷ್ಟಿಯ ।
ನೊದಗಿಸಿದೆನಿನಗಿತ್ತ ನೋಡಾ ।
ಸದಮಲನೆ ನೋಡೆನ್ನ ದಿವ್ಯಾತ್ಮಸ್ವರೂಪವಿದೊ ॥
ಮುದದಿ ನೋಡೆಂದಾಗಲೇ ತೋ ।
ರಿದನು ತನ್ನಯ ವಿಶ್ವರೂಪವ ।
ನದನು ಬಣ್ಣಿಸಿನುಡಿವನಾರೀ ಮೂರುಲೋಕದಲಿ ॥ ೬ ॥

ಇಳೆಯರಸ ಕೇಳಿತ್ತ ಲೆಕ್ಕಂ ।
ಗೊಳದನಿತು ಮೋರೆಗಳ ಕಂಗಳ ।
ಹೊಳೆವ ದಿವ್ಯಾಭರಣ ಗಂಧ ಸುಮಾಲ್ಯವಸ್ತ್ರಗಳ ॥
ತಳೆದ ವಿವಿಧಾಶ್ಚರ್ಯಲೀಲೆಯ ।
ಬಳಸಿ ದಿವ್ಯಾಯುಧಗಳಿಂದು ।
ಜ್ವಲಿಸಿ ತೋರುವ ವಿಶ್ವರೂಪವ ಕಂಡನಾಪಾರ್ಥ ॥ ೭ ॥

ಕೋಟಿಸೂರ್ಯಪ್ರಭೆಯಿದಕೆ ಸರಿ ।
ಸಾಟಿಯಲ್ಲೆಂದೆಂಬ ತೇಜದ ।
ನೋಟಕರ ಕಣ್ಮನವನಳ್ಳಾಡಿಸುವ ಬಿತ್ತರದ ॥
ಆಟದಿಂದೆಡೆಗೊಂಡ ಲೋಕದ ।
ಕೂಟವಿಲ್ಲಿಹುದೆಂಬ ವಿಶ್ವದ ।
ನಾಟಕದ ವರಸೂತ್ರಧಾರಿಯ ಕಂಡನಾಪಾರ್ಥ ॥ ೮ ॥

ನೋಡಿ ಬೆರಗಾದನು ಧನಂಜಯ ।
ನೀಡಿರಿವ ಭಯಭಕ್ತಿ ಸಂತಸ ।
ಮೂಡಿತೊಮ್ಮೆಯೆ ಮನದಿ ಪುಳಕಿತನಾದನಡಿಗಡಿಗೆ ॥
ಆಡುವೊಡೆ ಮತ್ತೊಂದರಲಿ ಬಗೆ ।
ಗೂಡವಡಿಗೆಡದೆದ್ದು ಕೈಗಳ ।
ಜೋಡಿಸುತ ನಿಂದೆರಗಿ ಮಿಗೆ ಕೊಂಡಾಡಿದನುಬಿಡದೆ ॥ ೯ ॥

ದೇವದೇವನೆ ನಿನ್ನದೇಹದಿ ।
ದೇವರುಳ್ಳನಿಬರ್ಕಳನು ರಾ ।
ಜೀವಜನ್ಮನ ಸಹಿತ ಕಂಡೆನು ಸಕಲಋುಷಿಗಳನು ॥
ದೇವ ನಾನಿದೊ ಕಂಡೆನೈ ಭೂ ।
ತಾವಳಿಗಳನು ಸರ್ಪಸಂತಾ ।
ನಾವಳಿಗಳನು ಕಂಡೆನೈ ವಿಶ್ವೇಶ್ವರನೆ ವಿಭುವೆ ॥ ೧೦ ॥

ಎನಿತು ತೋಳುಗಳೆನಿತು ಮೊಗಗಳ ।
ವೆನಿತು ನೇತ್ರೋದರಗಳಿಹವಿ ।
ನ್ನೆನಿತು ಚಕ್ರಗದಾದಿ ನಾನಾಯುಧಗಳಿಹವಿನ್ನು ॥
ಕನಕಕೋಟೀರಂಗಳಿಹವಿ ।
ನ್ನೆನಿತೆಸುವುದನು ಗಣಿಸಲಾನರಿ ।
ಯೆನು ಮಹಾದೇವನೆ ಮಹೇಶ್ವರನೇ ಜಗನ್ಮಯನೆ ॥ ೧೧ ॥

ಎತ್ತನೋಡಿದಡತ್ತ ನೀನೇ ।
ಮುತ್ತಿತುಂಬಿಹೆ ನಿನ್ನಕಡೆಬುಡ ।
ವೆತ್ತಲೆಂದಾನರಿಯೆನೆಣ್ದೆಸೆಗಳಲಿ ಜಗಜಗಿಸಿ ॥
ಹೊತ್ತುವಗ್ನಿಯ ರವಿಯ ತೇಜಗ ।
ಳೊತ್ತರಿಸಿನಿಂದಂತೆವೊಲು ಕ ।
ಣ್ಗತ್ತುವೀ ಸುಪ್ರಭೆಯ ಕಂಡೆನು ಸುಪ್ರಭಾಮಯನೆ ॥ ೧೨

ಆದಿ ಮಧ್ಯಾಂತಂಗಳಿಲ್ಲದ— ।
ನಾದಿ ನೀನಕ್ಷರವು ನೀಂತಿರ ।
ವಾದಧರ್ಮೋದ್ಧಾರ ಕರ್ತೃವು ನೀನುನೀಂವೇದ್ಯ ॥
ಬೋಧರೂಪನು ನೀಂ ಸನಾತನ ।
ನಾದ ಪುರುಷನುನೀನು ವಿಶ್ವವಿ ।
ನೋದಿ ನೀನೆಂಬುದನು ದಿಟವೆಂದರಿದೆ ನಾನೆಂದ ॥ ೧೩ ॥

ಜ್ವಲಿತ ಪಾವಕವಕ್ತ್ರಚಂದ್ರಮ ।
ಜಲಜ ಬಾಂಧವನೇತ್ರ ಧಾತ್ರೀ ।
ತಲ ದಿಗಂತಾಂತರಸಮಾಹಿತಗಾತ್ರ ನುತಿಪಾತ್ರ ॥
ಅಲಘುತರ ಸತ್ವಸ್ಥ ರೌದ್ರಾ ।
ಕಲಿತನಿನ್ನಮಹಾದ್ಭುತದನಿ ।
ಸ್ತುಲಿತರೂಪಕೆ ಬೆದರಿ ಲೋಕತ್ರಿತಯ ಬೆಂಡಾಯ್ತು ॥ ೧೪ ॥

ಪಾಡಿ ನಿಲುವರು ಕೆಲರು ಸಂತಸ ।
ಗೂಡಿನಿಲುವರು ಕೆಲರು ಬಂದೆಡೆ ।
ಯಾಡಿ ನಿಲುವರು ಭಕ್ತಿಯಲಿ ದೇವತೆಗಳೆಲ್ಲವರು ॥
ಕೂಡಿಸಿದ್ಧರು ಋಷಿಗಳುರೆಕೊಂ ।
ಡಾಡಿ ನಿಲುವರು ಸ್ವಸ್ತಿವಚನದಿ ।
ನೋಡಿ ನಿಲುವರು ಬೆದರಿ ರುದ್ರಾದಿತ್ಯ ಮೊದಲಹೆರು ॥ ೧೫ ॥

ವಸು ಮರುದ್ಗಂಧರ್ವ ಯಕ್ಷ।
ಪ್ರಸರ ವಿಶ್ವೇದೇವ ಪಿತೃ ರಾ।
ಕ್ಷಸಗಣಂಗಳು ಸಹಿತ ನಿನ್ನನೆ ನಟ್ಟಕಂಗಳಲಿ ॥
ಬೆಸೆದು ನೋಳ್ಪರು ಬೆದರಿ ನಿನ್ನೀ।
ಬಸಿರು ಕಾಲ್ದೊಡೆ ತೋಳು ಕಣ್ಮೊಗ।
ದೆಸಕಗಳ ಕಂಡಾನಿದೋ ಬೆಚ್ಚಿದೆನು ದೇವೇಶ ॥ ೧೬ ॥

ಮುಟ್ಟೆ ಮುಗಿಲನು ಮಿಾರ್ದಮೆಯ್ಯಳ।
ವಟ್ಟೆ ನಾನಾವರ್ಣ ಬಿಚ್ಚನೆ।
ಬಿಟ್ಟ ಬಾಯುರಿಗೆಂಡದಂತಿಹ ಕಣ್ಣು ಜಗಜಗಿಪ ॥
ಅಟ್ಟಹಾಸದ ಮೊಗವಿದನು ಬಗೆ।
ಗೆಟ್ಟೆ ಕಂಡಾನೆಲೆ ನಿಶಾಟಘ।
ರಟ್ಟೆ ದಯದೋರೆನ್ನೊಳೆಂದನು ಪಾರ್ಥ ಕೆಯ್ಮುಗಿದು ॥ ೧೭ ॥

ಆ ದುರಾತ್ಮರು ಕೌರವಾದಿ ಸ।
ಹೋದರರು ನೆರವಾಗಿ ಬಂದಿಹೆ।
ಮೇದಿನೀಶ್ವರ ಭೀಷ್ಮಕರ್ಣ ದ್ರೋಣರಿಂಗೂಡಿ ॥
ಕಾದಿ ನಮ್ಮುಯಭಟರೊಡನೆ ತೆರ।
ವಾದ ನಿನ್ನಯ ಬಾಯೆಡೆಗೆ ತು।
ತ್ತಾದುದನು ನಾನೀಗ ಕಂಡೆನೊ ಕಂಡೆನಚ್ಯುತನೆ ॥ ೧೮ ॥

ಸಿಡಿದು ನಿನ್ನ ಕರಾಳ ದಂಷ್ಟ್ರಗ।
ಳೆಡೆಯಸೇರಿದ ಭಟರ ತಲೆಯೋ।
ಡೊಡೆದಿಡಿದು ಪುಡಿಯಾದುದಿನ್ನೀ ಮುಖ ದವಾನಲನ ॥
ಕಡೆಗೆ ತಾವೇ ಬಹರು ಲೋಕದ।
ಕಡುಗಲಿಗಳೆಂಬವರು ದೀಪದ।
ಕಡೆಗೆ ತಾವೇ ಹಾರಿ ಬೀಳುವ ಶಲಭಗಳ ತೆರದಿ ॥ ೧೯ ॥

ಹರಿವ ಹೊಳೆ ಹಳ್ಳಂಗಳೆಲ್ಲವು ।
ಹರಿದು ಶರಧಿಯ ಸೇರುವಂದದೊ ।
ಉರಿವ ನಿನ್ನಮೊಗಂಗಳನು ಸೇರುವುವು ಲೋಕಗಳು ॥
ಹರಣವಳಿದಾ ಸಕಲಲೋಕವ ।
ಹರಿದು ನೀನೇ ನುಂಗಿದಪೆಯಾ- ।
ನರಿಯಲಾಪೆನೆ ನಿನ್ನ ಮಹಿಮೆಯ ದೇವದೇವೇಶ ॥ ೨೦ ॥

ವ್ಯಗ್ರಮತಿಯಾನಾದೆನೈಸೆ ಸ ।
ಮಗ್ರಲೋಕಂಗಳನು ನೀನೇ ।
ನಿಗ್ರಹಿಸಲುದ್ಯುಕ್ತನಹೆ ನಿನ್ನಾಟವನು ನೋಡಿ ॥
ಉಗ್ರರೂಪಿಯೆ ವಂದಿಸುವೆ ದೇ ।
ವಾಗ್ರಣಿಯೆನಿನಗೆನಗೆ ಕೃಪೆಯೊಳ ।
ನುಗ್ರಹಿಸಿಪೇಳಾರು ನೀನೆಂಬುದನು ತಿಳಿವಂತೆ ॥ ೨೧ ॥

ಕಾಲನಾನೆಲೆ ಪಾರ್ಥ ಲೋಕೋ ।
ನ್ಮೂಲನಕೆ ತೊಡಗಿದೆನು ಬಿಡುವಾ ।
ಕಾಲಬಾರದೆ ಬಿಡೆನು ಹಿಡಿದೀ ಕೆಲಸವಿದನಿನ್ನು ॥
ಜಾಲವಲ್ಲರಿಗಳಲಿ ಸಿಂಧುನೃ- ।
ಪಾಲ ಭೀಷ್ಮದ್ರೋಣ ಮೊದಲಹೆ ।
ಕೋಲ ಕಡುಹಿನ ಕಲಿಗಳಳಿದರು ನೋಡು ನೀನದನು ॥ ೨೨ ॥

ಹೆಸರಿಗಿನ್ನವರೊಡೆನೆ ಯುದ್ಧವ ।
ನೆಸಗು ಕೊಂದವ ಪಾರ್ಥನೆಂದೆಂ ।
ಬಸಮಕೀರ್ತಿಯಗಳಿಸು ನಿನ್ನಿಂದವರು ಸತ್ತಪರು ॥
ಬೆಸನಗೊಳದಿರು ಮನದಿ ನೀನೀ ।
ರಸೆಯ ನಾನಾಪರಿಯ ಸಂಪ ।
ದ್ವಿಸರದಲಿ ಸುಖಿಯಾಗಿ ಬಾಳು ಸಮಸ್ತ ವಿಭವದಲಿ ॥ ೨೩ ॥

ಕೇಳಿದನು ಕೇಶವನ ನುಡಿಯನು ।
ಕೋಳುವೋದನು ಪಾರ್ಥನಚ್ಚರಿ ।
ತಾಳಿದನು ಭಯವಾಂತನಾಗಳೆ ಕಂಪಿಸಿತು ದೇಹ ॥
ಪೇಳುವೊಡೆ ಬೇರೇನುಮಂ ಬಗೆ ।
ಗೇಳದಿರಲಡಿಗೆರಗಿ ನಿಂದು ಕೃ ।
ಪಾಳುವನು ಕೊಂಡಾಡಿ ಗದ್ಗದರವದಿ ನುತಿಸಿದನು ॥ ೨೪ ॥

ಉತ್ತಮೋತ್ತಮ ನಿನ್ನ ಕೀರ್ತಿಯ ।
ಬಿತ್ತರದಿ ಜನರೆಲ್ಲರತಿಮುದ ।
ವೆತ್ತುನಲಿದುಲಿವುತ್ತಲತ್ಯಾಸಕ್ತರಾಗಿಹರು ॥
ಸುತ್ತಿಸಿದ್ಧರು ನಮಿಸುವರು ಮೇ ।
ಣತ್ತಲಿತ್ತಲು ರಕ್ಕಸರು ಕಂ ।
ಡತ್ತಲೋಡುವರಂಜಿ ದೇವೇಶ್ವರ ಹೃಷೀಕೇಶ ॥ ೨೫ ॥

ಪರಮ ಪುರುಷಾನಂತ ವಿಶ್ವಂ ।
ಭರ ಮಹಾತ್ಮವರೇಣ್ಯ ವಿಶ್ವೇ ।
ಶ್ವರ ನಿರಾಮಯ ವೇದ್ಯ ವಿತ್ತ ಮಹಾಶ್ರಯಸ್ಥಾನ ॥
ವರುಣ ವಾಯು ಕೃತಾಂತ ವೈಶ್ವಾ- ।
ನರ ನಿಶಾಕರ ಪಿತೃ ಪಿತಾಮಹ ।
ಸರಸಿಜಾಸನರೂಪ ನಿನಗಾಂ ನಮಿಪೆ ನಮಿಸುವೆನು ॥ ೨೬ ॥

ವಂದಿಸುವೆ ಸರ್ವಾತ್ಮಕನೆ ನಾಂ ।
ಮುಂದೆ ಹಿಂದೆಡಬಲಕೆ ನಿಂದಾಂ ।
ವಂದಿಸುವೆನೆಣೆಯಿಲ್ಲದನಿತು ಪರಾಕ್ರಮಾನ್ವಿತನೆ ॥
ವಂದಿಸುವೆ ಸರ್ವಗನೆ ಸರ್ವನೆ ।
ವಂದಿಸುವೆನೆಲೆ ದೇವ ನಿನಗಾಂ ।
ವಂದಿಸುವೆನಿದೊ ನಿನಗೆ ಸಾಸಿರ ವಂದನೆಗಳಿರಲಿ ॥ ೨೭ ॥

ಅರಿಯದಜ್ಞಾನದಲಿ ಯಾದವ ।
ರೆರೆಯ ನೇಹಿಗ ಕೃಷ್ಣ ಕೇಳೆಂ ।
ದೊರೆದು ನಾನಾಪರಿಯ ಚೇಷ್ಟೆಯನಾಟಕೂಟದಲಿ ॥
ಮೆರೆದು ನಿನಗಪಮಾನಿಸಿದ ಪರಿ
ಪರಿಯ ತಪ್ಪುಗಳುಳ್ಳೊಡದನೀಂ ।
ಮರೆದು ಮನ್ನಿಪುದೆನ್ನನೆಂದೆರಗಿದನು ಚರಣದಲಿ ॥ ೨೮ ॥

ಪರಮಪೂಜ್ಯ ಚರಾಚರಾತ್ಮಕ ।
ಗುರುವರೇಣ್ಯ ಜಗಜ್ಜನಕ ನಿ ।
ನ್ನೊರೆಗೆವರ್ಪವರಾರು ಮತ್ತೀಮೂರುಲೋಕದಲಿ ॥
ಕರೆದುಮಗನಂ ತಂದೆನೋಳ್ಪಂ ।
ತಿರೆ ಗೆಳೆಯನಂ ಗೆಳೆಯನೋಳ್ಪಂ ।
ತಿರೆ ಮಹಾವಿಭುವೇ ಪ್ರಸನ್ನತೆಯಿಂದ ನೋಡೆನ್ನ ॥ ೨೯ ॥

ನೋಡದಿಹ ನಿನ್ನಾತ್ಮರೂಪವ ।
ನೋಡಿ ಸಂತಸವಟ್ಟೆನಾದರು ।
ಮಾಡಲೇನಾಂ ಮನವು ತಲ್ಲಣಿಸುವುದು ಭೀತಿಯಲಿ ॥
ಮಾಡು ದಯೆಯನು ಮುನ್ನಿನಂದದ ।
ಮೂಡು ವೆಳೆನಗೆಮೊಗದ ನಾಲ್ಗೈ ।
ಗೂಡಿರಂಜಿಪ ಮನುಜರೂಪವ ತೋರು ದೇವೇಶ ॥ ೩೦ ॥

ಹೊಳೆವ ಪೀತಾಂಬರದ ರತ್ನೋ ।
ಜ್ವಳಕಿರೀಟದ ಮುತ್ತಿನೇಕಾ ।
ವಳಿಯ ಬಜ್ಜರದುಂಗುರದ ಮಣಿಕುಂಡಲದ್ವಯದ ॥
ತೊಳಪಪಾರುಂಬಳೆವಿಡಿದ ಶ್ರೀ ।
ನಿಳಯ ನಿನ್ನಯ ಮೋಹನಾಂಗದ ।
ನಳಿನನೇತ್ರದ ದಿವ್ಯರೂಪವ ತೋರು ದೇವೇಶ ॥ ೩೧ ॥

ಕುರುವರೇಣ್ಯನೆ ಕೇಳು ಲೋಕದಿ ।
ವರತಪಸ್ವಾಧ್ಯಾಯ ದಾನಾ ।
ಧ್ವರನಿಯತಕರ್ಮಾದಿ ನಾನಾಸಾಧನೆಗಳಿಂದ ॥
ಅರಿದುನೋಡಲು ಸಿಗದ ತೇಜೋ ।
ಭರಿತವಪ್ಪೆನ್ನಾತ್ಮರೂಪವ ।
ನಿರದೆತೋರಿದೆ ಮೆಚ್ಚಿನಿನಗಾಂ ಯೋಗಬಲದಿಂದ ॥ ೩೨ ॥

ಘೋರರೂಪೀ ರೂಪವನು ಕ ।
ಣ್ಣಾರೆ ಕಂಡಳುಕಿದೆಯ ಪೂರ್ವಾ ।
ಕಾರವನೆ ನೀಂ ಪಾರ್ಥ ಸುಪ್ರೀತಿಯಲಿ ನೋಡೆಂದು ॥
ತೋರಿದನು ಮೋಹನದ ಸೌಮ್ಯಾ ।
ಕಾರವನು ನಿಜಜೀವವದು ಸಂ ।
ಚಾರವಾದಂತಾಗಿ ಫಲುಗುಣ ಕಂಡನಾ ಹರಿಯ ॥ ೩೩ ॥

ನೋಡಿದೆಯಲಾ ವಿಶ್ವರೂಪವ ।
ನೋಡಲೊದಗದ ರೂಪವದನೇ ।
ನೋಡಿಕೊಂಡಿರಲಾಸೆವಡುವವು ದೇವ ಸಮಿತಿಗಳು ॥
ಮಾಡುವೀ ಜಪ ಯಜ್ಞ ದಾನ ಸ- ।
ಗಾಢಸುವ್ರತ ತಪಗಳಿಂ ಕೈ ।
ಗೂಡದಾ ರೂಪವನು ನೋಳ್ಪೊಡೆ ಭಕ್ತಿಯಿಲ್ಲದೊಡೆ ॥ ೩೪ ॥

ಉಕ್ತಕರ್ಮಗಳೆನ್ನವುಗಳೆಂ ।
ಬುಕ್ತಿಯನು ಮರೆಯದೆ ಸದಾ ಸ ।
ದ್ಭಕ್ತಿಯಿಂದಲಿ ಮತ್ಪರಾಯಣನಾದ ಮಾನವನು ॥
ಮುಕ್ತನೆಂದರಿ ಪಾರ್ಥ ನೀನೀ ।
ಯುಕ್ತಿಯನು ಕೈಗೊಳುವುದೆಂದಾ ।
ಭಕ್ತವತ್ಸಲ ಮಂಗಲ ಶ್ರೀರಮಣನಿರವಿಸಿದ ॥ ೩೫ ॥

—*○*—

## ೧೨ನೆಯ ಸಂಧಿ

ಸೂ || ಯುಕ್ತಿಯುಕ್ತ ವಚೋಲಹರಿಯಿಂ |
ಮುಕ್ತಿದಾಯಕನರ್ಜುನಗೆ ತಾಂ |
ಭಕ್ತಿಯೋಗವನೊಲಿದು ಬೋಧಿಸಿದನು ಸರಾಗದಲಿ ||

ಭಕ್ತವತ್ಸಲ ಕೇಳು ಭಗವ |
ದ್ಭಕ್ತರಾದೀ ಧರೆಯ ಯೋಗನಿ- |
ಯುಕ್ತ ಮಾನಸರೊಳಗೆ ನಿನ್ನನೆ ಬಗೆದುಪಾಸಿಸುವ ||
ವ್ಯಕ್ತ ಪೂಜಾರತರೊ, ಮೇಣ- |
ವ್ಯಕ್ತ ಪೂಜಾರತರೊ ಪೇಳಿದ |
ಭಕ್ತರೊಳಗುತ್ತಮನದಾರಾ ಯೋಗವಿದರೊಳಗೆ || ೧ ||

ಕುರುಕುಲೋತ್ತಮ ಕೇಳು ಕುರುಪಿ |
ಟ್ಟರಿದು ತೋರ್ಪೊಡಶಕ್ಯವಪ್ಪ |
ಕ್ಷರವಚಿಂತ್ಯವೆನಿಪ್ಪ ಪರವಸ್ತುವನುಪಾಸಿಸುವ ||
ಹಿರಿಯರಿಂ ಸರ್ವಾತ್ಮನಾನೆಂ |
ದರಿದು ಭಕ್ತಿಯೊಳೆನ್ನನೇ ಕು |
ಳ್ಳಿರಿಸಿಮನದೊಳುಪಾಸಿಸುವರೇ ಮಿಗಿಲು ಭಾವಿಪೊಡೆ || ೨ ||

ಆದರವ್ಯಕ್ತದಲಿ ಸುಸ್ಥಿರ ||
ವಾದಚಿತ್ತದ ಭೂತದಯೆಯಿಂ |
ತೇದಮನದ ಜಿತೇಂದ್ರಿಯರು ಸಹಿತೆನ್ನನೈದುವರು ||
ಸಾಧನೆಯದತಿಕಠಿಣತರವಂ |
ತಾದಕಾರಣ ಮನುಜದೇಹದೊ |
ಳಾದವರಿಗದು ಕಷ್ಟಸಾಧ್ಯವು ಪಾರ್ಥ ತಿಳಿಯೆಂದ || ೩ ||

ಅದಕೆ ವ್ಯಕ್ತೋಪಾಸಕರ ನಾ ।
ನಧಿಕರೆಂದೇ ಪೇಳ್ದೆನದರಿಂ ।
ದೊದಗಿಬಹ ಕರ್ಮಗಳ ಕೈಗೆದೆನ್ನೊಳರ್ಪಿಸುವ ॥
ಸದಮಳರ ಬಿಡದೆನ್ನನೇ ಚಿ ।
ತ್ತದಲಿ ನೆನೆವರನೆತ್ತಿ ಸಂಸೃತಿ ।
ಯುಧದಿಯಿಂ ದಾಂಟಿಸುವೆನಾಗಳೆ ನಾನೆಕೇಳಿಂದ ॥ ೪ ॥

ಎನ್ನೊಳೇ ಮನವಿಟ್ಟು ಬುದ್ಧಿಯ ।
ನೆನ್ನೊಳೇ ತಿರವಡಿಸಲರಿವವ ।
ರೆನ್ನೊಳೇ ನೆಲೆಗೊಂಬರೈ ಸಂದೇಹ ಬೇಡಿದಕೆ ॥
ಇನ್ನು ನಿನಗಾ ಬಲುಹು ಬಾರದೊ ।
ಡೆನ್ನರೂಪದಿ ಪೊಂದಲಹುದನು ।
ಮುನ್ನನೀನಭ್ಯಾಸವನು ಮಾಡೇಕಚಿತ್ತದಲಿ ॥ ೫ ॥

ಆರೆನೆನಲದಕೆನ್ನ ಪಡೆವೊಡೆ ।
ಸಾರಿಪೇಳಿದ ಕರ್ಮದಲಿ ಕಾ ।
ಲೂರಿನಿಲು ನಿಲಲಾರೆನೆನಲೆನ್ನಾಶ್ರಯದಿ ನಿಂದು ॥
ದೂರವಿದ್ದಾ ಕರ್ಮಫಲವೆಂ ।
ಬೂರುಗೋಲಿನ ಸಂಗದಿಂ ನಡೆ ।
ದೋರಗಲಿಯದೆ ಸಾಕು ನಿನಗಾ ಸಿದ್ಧಿಗೈದುವೊಡೆ ॥ ೬ ॥

ಜ್ಞಾನವೇ ಮಿಗಿಲೆನಿಪುದಭ್ಯಾ ।
ಸಾನುವರ್ತನದಿಂದಲಿನ್ನಾ ।
ಜ್ಞಾನದಿಂದಲಿ ಮಿಗಿಲೆನಿಸುವುದು ಧ್ಯಾನ ನೋಡುವೊಡೆ ॥
ಧ್ಯಾನದಿಂದಲಿ ಮಿಗಿಲು ಫಲದೊಳ ।
ಗೇನನುಂ ಚಿಂತಿಸದ ಕರ್ಮವು ।
ಮಾನಸಿಧಿಕೇಳದರಿನೊಡನೆಯೆ ಶಾಂತಿ ಲಭಿಸುವುದು ॥ ೭ ॥

ದ್ವೇಷಮತಿವರ್ಜಿತರು ಕರುಣಾ ।
ಭೂಷಣಾಂತಃಕರಣವೇಶರ ।
ಶೇಷ ಭೂತಂಗಳಲಿ ಮೈತ್ರೀಭಾವದಿಂದಿಹರು ॥
ತೋಷಚಿತ್ತರು ನಿರ್ಮಮರು ನಿ ।
ರ್ದೋಷರಧಿಗತಸತ್ವಶೀಲರು ।
ರೋಷ ಭಯ ಕಾಮಗಳನುಳಿದವರೆನಗತಿಪ್ರಿಯರು ॥ ೮ ॥

ಪೀಡಿಸುವ ಪೀಡಕರ ಕಡುತರ ।
ಪೀಡೆಯಿಂದುದ್ವೇಗಗೊಳ್ಳದೆ ।
ಪೀಡಿಸದೆ ತಾನಾರನೊಂದೇಪರಿಯೊಳೆಲ್ಲರನು ॥
ನೋಡಿ ಫಲದೊಳಪೇಕ್ಷೆಗೊಳ್ಳದೆ ।
ಮಾಡಿಕರ್ಮಂಗಳನು ಸನ್ಮತಿ ।
ಗೂಡಿ ಭಜಿಸುವ ಭಕ್ತರೇ ನೋಡೆನ್ನ ಸುಪ್ರಿಯರು ॥ ೯ ॥

ನಿರ್ಮಲರು ನಿರಪೇಕ್ಷರನ್ವಯ ।
ಧರ್ಮದಲಿ ಶ್ರದ್ಧಾನ್ವಿತರು ನಿಂ ।
ದೊರ್ಮನದ ನಿಶ್ಚಲರು ದ್ವಂದ್ವಾತೀತರುತ್ತಮರು ॥
ಪೆರ್ಮೆಕೀಳ್ಮೆಗಳಹ ಶುಭಾಶುಭ ।
ಕರ್ಮವನು ಲೆಕ್ಕಿಸದ ಸುಸ್ಥಿರ ।
ಕರ್ಮಯೋಗಿಗಳೆನಿಪರಾರೆನಗವರತಿಪ್ರಿಯರು ॥ ೧೦ ॥

ತೆಗಳಿಕೆಯ ಪೊಗಳಿಕೆಯನೊಂದೇ ।
ಬಗೆಯಲರಿವ ಮಹಾನುಭಾವರು ।
ಸಿಗುವನಿತರಿಂ ತುಷ್ಟರಹ ಸನ್ಮಾನ್ಯ ಮಾನಿಗಳು ॥
ಬಿಗಿದುಕಟ್ಟಿದ ಕರ್ಮಫಲವೆಂ ।
ಬೊಗುಮಿಗೆಯ ಮನೆಗಿನೆಯನೊಲ್ಲದ ।
ಭಗವದಾರಾಧಕರೆನಿಪ್ಪವರೆನಗತಿಪ್ರಿಯರು ॥ ೧೧ ॥

ಶ್ರದ್ಧೆಯಿಂದಿದನಾರುಪಾಸಿಸಿ ।
ಸಿದ್ಧಿಗೆಳಸುವರವರು ಮೃತ್ಯುವ ।
ನೊದ್ದು ನಿಲುವರು ಪಾರ್ಥಕೇಳವರೆನ್ನ ಸುಪ್ರಿಯರು ॥
ಬದ್ಧವೆಂದಾದರದಿ ಸುರನರ ।
ಸಿದ್ಧಮಣಿಕೋಟೀರ ಕಿರಣ ನಿ ।
ಬದ್ಧಪದನಹ ಮಂಗಲಶ್ರೀಯರಸನುಸಿರಿದನು ॥ ೧೨ ॥



## ೧೩ನೆಯ ಸಂಧಿ

ಸೂ || ಪತ್ರಿವಾಹನನಧಿಕಪುಣ್ಯಾಚ |
ರಿತ್ರನತಿಕಾರುಣ್ಯದಿಂದಲಿ |
ಕ್ಷೇತ್ರವನು ಕ್ಷೇತ್ರಜ್ಞನಿರವನು ಪೇಳ್ದನರ್ಜುನಗೆ ||

ಕ್ಷಾತ್ರತೇಜೋನಿಧಿಯೆ ಕೇಳೈ |
ಗಾತ್ರವೆಂದೊಡೆ ಕ್ಷೇತ್ರವಿಂತೀ |
ಕ್ಷೇತ್ರವೆಂತೆಂದರಿತವನೆ ಕ್ಷೇತ್ರಜ್ಞನೆನಿಸುವನು ||
ಕ್ಷೇತ್ರವೆನಿತನಿತರಲಿ ನಾನೇ |
ಕ್ಷೇತ್ರವಿದನಾಗಿಪ್ಪೆನದರಿಂ |
ಕ್ಷೇತ್ರವೀಕ್ಷೇತ್ರಜ್ಞನರಿವೆನಲಪ್ಪುದೆನ್ನರಿವು || ೧ ||

ಆವುದೀಕ್ಷೇತ್ರವದೆನಲ್ಕಿ |
ನ್ನಾವ ಪರಿಯಾಗಿಪ್ಪುದದರೊಳ |
ಗಾವುದೆಲ್ಲವದಿಹುದು ಪುಟ್ಟಿದುದಾವುದವುಗಳೊಳು ||
ಆವನೀಕ್ಷೇತ್ರಜ್ಞನಾತನ |
ಭಾವವೇನೆಂದೆಂಬುದೆಲ್ಲವ |
ನಾ ವಿವಿಧ ಛಂದಂಗಳಿಂದೊರೆದಿಹರು ಋಷಿವರರು || ೨ ||

ಅದನೆ ಪೇಳ್ದರು ಬ್ರಹ್ಮಸೂತ್ರದ |
ಪದಗಳಿಂ ಪವಣರಿದು ವೊದಲಾ |
ನದನು ಪೇಳುವೆ ನಿನಗೆ ಸಂಕ್ಷೇಪದಲಿ ತಿಳಿವಂತೆ ||
ವಿಧುಕುಲೋತ್ತಮ ಕೇಳು ನಭ ಭೂ |
ಮ್ಯುದಕ ತೇಜ ಸಮೀರ ಮನವಿ |
ನ್ನಿದಕೆ ಬುಧ್ಯವ್ಯಕ್ತ ಹಂಕೃತಿ ವಿಷಯಗಳವೈದು || ೩ ||

ಹತ್ತು ತೆರನಾದಿಂದ್ರಿಯಂಗಳು ।
ಮತ್ತೆ ಸಂಘಾತೇಚ್ಛೆ ಚೇತನ ।
ವೃತ್ತಿ ದುಃಖದ್ವೇಷ ಧೃತಿ ಸುಖವಿವುಗಳುಂ ಬೆರೆದು ॥
ವೊತ್ತವಪ್ಪುದನೇ ವಿಕಾರತೆ ।
ವೆತ್ತಿಹುದನೇ ಕ್ಷೇತ್ರವೆಂಬರು ।
ಪಾರ್ಥ ತಿಳಿಯಾ ಕ್ಷೇತ್ರಗಳ ಕ್ಷೇತ್ರಜ್ಞನಾನೆಂದು ॥ ೪ ॥

ದುರಭಿಮಾನಾಡಂಬರಗಳನು ।
ಮರೆವ ಹಿಂಸೆಯನುಳಿವ ನಿಜಗುರು ।
ಹಿರಿಯರನು ಸೇವಿಸುವ ತಪ್ಪದೆ ಶಾಂತಿಯನು ತಳೆವ ॥
ಸ್ಥಿರತೆಯನು ಕೈಗಾವ ವಿಷಯಾ ।
ತುರತೆಯನು ಕಿತ್ತೊಗೆದು ನಿಲುವೀ ।
ಸರಲಭಾವದ ನಡತೆಯರಿವೇ ಜ್ಞಾನವೆನಿಸುವುದು ॥ ೫ ॥

ಜರೆ ಜನನ ಮೃತಿ ಬೇನೆ ಬೇಸರ ।
ವಿರುವುವೆಲ್ಲರಿಗೆಂದು ತಿಳಿವುದು ।
ತರುಣಿ ಸುತ ಮನೆಮಾರಿನಲಿ ಹಂಬಲವ ತೊರೆದಿಹುದು ॥
ಗರುವಪಡದಿಹುದಶುಭ ಶುಭವೆಂ ।
ದಿರದೆ ಬಂದುದನನುಭವಿಸುವುದು ।
ಮರವೆಗೆಡೆಗೊಡದಿಪ್ಪುದದು ಸುಜ್ಞಾನ ಕೇಳೆಂದ ॥ ೬ ॥

ಶುಂಠರಲಿ ಕೆಳೆಗೊಳದ, ಮನಸಿನ ।
ಮಂಟಪವನತ್ತಿತ್ತ ತಿರುಗಿಸ ।
ದೊಂಟಿಯಿಂದಿರ ಬಗೆವ, ಕರ್ಮದೊಳಲಸಿಕೆಯ ತಳೆವ ॥
ಕಂಟಕವನನ್ಯರಿಗೊಡರ್ಚದೊ ।
ರಂಟು ತನದಲಿ ದೈವಭಕ್ತಿಯ ।
ಗಂಟನಳಿಯದ ತಿಳುವಳಿಕೆಯೇ ಜ್ಞಾನವೆನಿಸುವುದು ॥ ೭ ॥

ತಾನದಾರೆಂದರಿವ ತತ್ವ ।
ಜ್ಞಾನ ಸಿದ್ಧಾಂತವನು ನೋಡುವ ।
ಜ್ಞಾನದೊಳಗಧ್ಯಾತ್ಮವಿಂತಿದೆ ನಿತ್ಯವೆಂದರಿವ ॥
ಜ್ಞಾನವೇ ಸುಜ್ಞಾನ ಮಿಕ್ಕಿನ ।
ಜ್ಞಾನವೆನಲಜ್ಞಾನ ಕುಂತೀ ।
ಸೂನುಕೇಳ್ಳೈ ಜ್ಞೇಯವವದನಿನ್ನೊರೆವೆ ಕೇಳೆಂದ ॥ ೮ ॥

ಅರಿತರದನು ವಿಮುಕ್ತರಪ್ಪರು ।
ಪರಕೆಪರವದನಾದಿಯದು ನೀ ।
ನರಿತುಗೊಳ್ಳೈಲೆ ಪಾರ್ಥ ಪೇಳುವೊಡದು ಪರಬ್ರಹ್ಮ ॥
ಚರಣ ನೇತ್ರ ಶ್ರೋತ್ರ ಮುಖ ಶಿರ ।
ಕರಗಳಿಹವೆಲ್ಲೆಡೆಯೊಳದಕಾ ।
ವರಿಸಿನಿಂದಿಹುದದು ಸಮಸ್ತೇಂದ್ರಿಯಗಳಿಹನಂತೆ ॥ ೯ ॥

ಆದರಂತಿಹುದಲ್ಲ ಸದಸ- ।
ತ್ತಾದ ವರ್ಗವದಲ್ಲ ಸರ್ವವ ।
ನಾಧರಿಸಿಕೊಂಡವುಗಳಿಂ ನಿರ್ಲಿಪ್ತವಾದುದದು ॥
ಆದ ಮೂರು ಗುಣಂಗಳಿಂ ಹೊರ ।
ಗಾದ ನಿರ್ಗುಣವೆನಿಪುದದು ಭೂ ।
ತಾದಿಗಳ ಹೊರಗೊಳಗೆ ಪೂರ್ಣತೆಯಿಂದ ಮೆರೆವುದದು ॥ ೧೦ ॥

ಚರವಚರವದು ದೂರವದು ಹ ।
ತ್ತಿರವದೈ ಸೂಕ್ಷ್ಮದಲಿ ಸೂಕ್ಷ್ಮದಿ ।
ಮೆರೆದಿರುವುದದು ಸರ್ವಭೂತಗಳೊಳಗೆ ಬೇರಿರ್ದು ॥
ಬೆರೆದು ಹರಿಹಂಚಾದ ಪರಿಯಿಂ ।
ದಿರುವುದಾದರು ಪೂರ್ಣತೆಯೊಳೊ ।
ಪ್ಪಿರುವ ಸೃಷ್ಟಿ ಸ್ಥಿತಿ ವಿನಾಶದ ಕರ್ತೃವದು ಪಾರ್ಥ ॥ ೧೧ ॥

ಕತ್ತಲೆಯನೆಬ್ಬಟ್ಟೆ ತೋರ್ಪ ।
ತ್ಯುತ್ತಮದ ಬೆಳಕಿನಲಿ ಬೆಳೆಕದು ।
ಮತ್ತೆ ಕೇಳೈ ಜ್ಞೇಯವದು ಸುಜ್ಞಾನವದು ಬಿಡದೆ ॥
ಹತ್ತಿನಿಂದಾಜ್ಞಾನ ಗಿರಿಯಿಂ ।
ದತ್ತ ನೋಡುವ ವಸ್ತು ಸರ್ವರ ।
ಚಿತ್ತದಲಿ ನೆಲಸಿರುವ ಪರತರವಸ್ತುವೆಂದೊಡದು ॥ ೧೨ ॥

ಎಂದಿನಿತನೆಲ್ಲವನು ತಿಳಿವರು ।
ಬಂದು ಕೂಡುವರೆನ್ನ ರೂಪಿನೊ ।
ಳೆಂದುತಿಳಿ ಪುರುಷ ಪ್ರಕೃತಿಗಳನಾದಿ ವಸ್ತುಗಳು ॥
ಎಂದು ತಿಳಿಯವುಗಳೊಳು ಪ್ರಕೃತಿಯಿ ।
ನೊಂದರಿಂದಲೆ ಗುಣವಿಕಾರಗ ।
ಳಂದೆ ಸಂಭವಿಸಿದವು ತಿಳಿಯಾ ಪಾರ್ಥನೀನೆಂದ ॥ ೧೩ ॥

ಕರಣ ಕಾರ್ಯಗಳೆಂದೆರಳ್ತೆರ ।
ವಿರುವವಕೆ ಕರ್ತೃತ್ವ ಹೇತುವು ।
ನರನೆ ಕೇಳೈ ಪ್ರಕೃತಿಯೈ ಸುಖದುಃಖವೆಂಬಿವಕೆ ॥
ಪರಿಕಿಸಲು ಭೋಕ್ತೃತ್ವ ಹೇತುವು ।
ಪುರುಷನಿನ್ನವನಾ ಪ್ರಕೃತಿಯಲಿ ।
ಬೆರೆದಧಿಷ್ಠಿತನಾಗಿ ನಿಂದೆಡೆಗೊಳುವನದರಿಂದ ॥ ॥ ೧೪ ॥

ಅನುಭವಿಸುವನು ಪ್ರಕೃತಿಜನ್ಯಗ ।
ಳೆನುವ ಗುಣಗಳನೆಲ್ಲವನು ತಾಂ ।
ಜನುಮವನು ತಾಳುವನು ಸದಸದ್ಯೋನಿ ಮುಖಗಳಲಿ ॥
ಅನುಸರಿಸಿ ನೋಡುವನದೊಪ್ಪಿತ ।
ವೆನುವನಾ ಗುಣಗಳಲಿ ಬೇಕೆಂ ।
ಬನಿತನೆಲ್ಲವ ತುಂಬಿಯುಂಬನು ಪಾರ್ಥಕೇಳೆಂದ ॥ ೧೫ ॥

ಬೆರೆದುಗುಣಸಂಗದಲಿ ದೇಹದೊ |
ಳಿರುವನಾ ಪುರುಷನೆ ಮಹೇಶನು |
ಪರಮ ಪೂರುಷನಾತನೇ ಪರಮಾತ್ಮನವನೆಂದು ||
ಅರಿದು ಪೇಳ್ದಾ ಪ್ರಕೃತಿಗುಣಗಳ |
ಪರಿಯನೆಲ್ಲವನರಿತರವರೆಂ |
ತಿರಲಿ ಜನ್ಮವಿದೂರರಹರೆಲೆ ಪಾರ್ಥಕೇಳೆಂದ || ೧೬ ||

ಕೆಲಕೆಲಂಬರು ಕರ್ಮಯೋಗದಿ |
ಕೆಲಕೆಲಂಬರು ಸಾಂಖ್ಯಯೋಗದಿ |
ಕೆಲಬರಿನ್ನಾ ಧ್ಯಾನಸಾಧನದಿಂದ ಕೆಲಕೆಲರು ||
ಬಲಿದ ಭಕ್ತಿಯೊಳಾಪ್ತ ವಚನದೊ |
ಳಲಸರಾಗದುಪಾಸಿಸುವ ನಿ |
ರ್ಮಲರು ಸಹಿತವರೆಲ್ಲರುಂ ಗೆಲ್ಲುವರು ಮೃತ್ಯುವನು || ೧೭ ||

ಜಂಗಮ ಸ್ಥಾವರಗಳೆಂದೆನಿ |
ಪಂಗವೆರಡರೊಳಾವುದಿರಲಿ ಬೆ |
ಡಂಗುವಡೆದೀ ಕ್ಷೇತ್ರವೀಕ್ಷೇತ್ರಜ್ಞನಿವರೊಳಗೆ ||
ಸಂಗವಹುದರಿನಪ್ಪುವಲ್ಲದೆ |
ಸಂಗಿಯೆನ್ನಿಸನೀಶ್ವರನು ಭೂ |
ತಂಗಳೊಳಗೊಂದೇಪ್ರಕಾರದೊಳವನು ನೆಲಸಿಹನು || ೧೮ ||

ಅಳಿವವುಗಳೊಡನಿದ್ದವುಗಳೊಡ |
ನಳಿಯದೆಲ್ಲೆಡೆಗಳಲಿ ಹೊರಗೊಳ |
ಗೊಳಗೆ ತುಂಬಿಹನಾವನೆಂದರಿತವನು ತಾನಾಗಿ ||
ಅಳಿಸದವನೈತನ್ನನವನು |
ಜ್ವಳಿಪ ನಿರ್ಮಲ ನಿತ್ಯವಹ ನಿಜ |
ನಿಳಯವನು ಸಾರುವನು ಕುಂತೀಸೂನು ಕೇಳೆಂದ || ೧೯ ||

ಅಪ್ಪುದೆಲ್ಲವು ಪ್ರಕೃತಿಯಿಂದಿಂ ।
ತಪ್ಪದೀ ಕರ್ಮದೊಳಕರ್ತನೆ ।
ನಿಪ್ಪನಾತ್ಮನು ಮಾಡನೇನನೆನಿಪ್ಪುದನು ತಿಳಿದು ॥
ಒಪ್ಪಿತೋರುವ ಬೇರೆ ಬೇರಿನಿ ।
ತಪ್ಪಿವೆಲ್ಲವನೊಂದರೊಳನಂ ।
ತಿಪ್ಪದೊಂದನು ಸರ್ವದೊಳು ಕಾಂಬಂದು ಸುಖಿಯಹನು ॥ ೨೦ ॥

ದೊರೆವುದಾತಗೆ ಬ್ರಹ್ಮಪದವೆಲೆ ।
ನರನೆ ಕೇಳ್ಪರಮಾತ್ಮನೆನಲಾ ।
ನೊರೆದೆನೈಸೆ ಅನಾದಿಯವನವ್ಯಯನು ನಿರ್ಗುಣನು ॥
ಇರುವನಾದರು ದೇಹವಿದರಲಿ ।
ಪರಿಪರಿಯ ಕರ್ಮಗಳಲೇಪಕೆ ।
ಮರೆದು ಮೈಗುಡನಾತನೇನನು ಮಾಡನವನೆಂದ ॥ ೨೧ ॥

ಬೆಳಕು ನಾಲ್ದೆಸೆಗಳಲಿ ಪಸರಿಸಿ ।
ಬೆಳಗುವದರಿಂದದಕೆಲೆಪ್ಪವು ।
ಕೊಳೆಗೆಸರಿನೆಂತಾದರಪ್ಪದೆ ಪೇಳದೇತೆರದಿ ॥
ಒಳಗೆ ಹೊರಗೆಲ್ಲೆಡೆಗೆ ಸೂಕ್ಷ್ಮದಿ ।
ಬೆಳಗುವಾತ್ಮಗೆ ಕರ್ಮದಿಂದು ।
ಜ್ಜಳಿಪಬಂಧದ ಲೆಪ್ಪವಪ್ಪದೆ ನೀನೆನೋಡೆಂದ ॥ ೨೨ ॥

ಬೆಳಗಿಸುವನೀಕ್ಷೇತ್ರಗಳನೊಂ ।
ದುಳಿಯದಾ ಕ್ಷೇತ್ರಜ್ಞನೆಲ್ಲವ ।
ನಿಳೆಯನೆಂತಿನನಂತಿರಾ ಕ್ಷೇತ್ರಗಳನವುಗಳನು ॥
ಬೆಳಗಿಸುವ ಕ್ಷೇತ್ರಜ್ಞನನುಮವ ।
ರೊಳಗಿರುವ ಭೇದವನು ಪ್ರಕೃತಿಯಿ ।
ಸುಳಿದು ಭೂತಗಳೈದಲಹುದನು ಕಾಂಬನಾವವನು ॥ ೨೩ ॥

ಆತನೀ ಸುಖದುಃಖ ಭಂಗೋ ।
ಪೇತವಹ ಸಂಸಾರಸಲಿಲಾ ।
ಖಾತವನು ಪಿಂದುಳುಹಿ ನಿಲುವನು ಬ್ರಹ್ಮಪದದೊಳಗೆ ॥
ನೀತಿವಿದ ಕೇಳೆಂದು ಋಷಿಸಂ ।
ಘಾತವಂದಿತ ಮಂಗಲಶ್ರೀ ।
ನಾಥ ನಿತ್ಯಾನಂದಕರನಂತೊರೆದನರ್ಜುನಗೆ ॥ ೨೪ ॥



## ೧೪ನೆಯ ಸಂಧಿ

ಸೂ ॥ ಭಯನಿವಾರಣಕೀರ್ತಿಯೊರೆದನು ।
ನಯದಿ ಪಾಂಡುತನೂಜಗೆ ಗುಣ ।
ತ್ರಯ ವಿಭಾಗ ವಿಭೇದಗಳ ಬಿಡದುಚಿತ ರೀತಿಯಲಿ ॥

ಬಿತ್ತರಿಸಿ ಪೇಳುವೆನು ತಿಳಿವಿನ ।
ಬಿತ್ತನೊಂದನು ಪಾರ್ಥಕೇಳ್ಳೈ ।
ಕಿತ್ತಡಿಗಳೊಳಗಗ್ಗಳರು ತಿಳಿದಿದನು ಬೆಂಬಿಡದೆ ॥
ಉತ್ತಮೋತ್ತಮ ಗತಿಯಪಡೆದರು ।
ಸತ್ತು ಹುಟ್ಟುವ ಭಯಗಳಳಿದಿ ।
ನ್ನಿತ್ತನಿಂದಪರೆನ್ನರೂಪಿನೊಳಿದನು ತಿಳಿದವರು ॥ ೧ ॥

ಅನಘಕೇಳ್ಳೈ ಪಾರ್ಥಪ್ರಕೃತಿಯ ।
ನೆನುವರು ಮಹದ್ಬ್ರಹ್ಮವೆಂದಿ ।
ನ್ನೆನಗೆ ಸೇರ್ದುದದೆನ್ನದೆಸೆಯಿಂ ಗರ್ಭವಹುದದಕೆ ॥
ಇನಿತು ಭೂತಗಳದರಿನಹವಿ ।
ನ್ನಿನಿತು ಮೂರ್ತಿಗಳೆಲ್ಲವಿವು ಸಂ ।
ಜನನವಹವಾ ಭೂತಯೋನಿಯ ಮುಖಗಳಿಂಬಿಡದೇ ॥ ೨ ॥

ಉದಿಸುವವಕದು ಯೋನಿಯದರಿಂ ।
ದದು ಮಹದ್ಯೋನಿಯು ಸದಾ ನಾ ।
ನದಕೆ ಬೀಜಪ್ರದನವರಿನಾಂ ತಾತನವುಗಳಿಗೆ ॥
ವಿಧವಿಧದ ಬಂಧನಗಳಿಂ ದೇ ।
ಹದಲಿ ನೆಲಸಿಪ್ಪಾತ್ಮನಂ ಕೆಡೆ ।
ಯೊಡೆವ ಮೂರುಗುಣಂಗಳುಂ ಪ್ರಕೃತಿಯಲಿ ಪುಟ್ಟಿದುವು ॥ ೩ ॥

ತೊಳಗಿ ತಾನೇತನ್ನೊಳಗೆ ನಿ।
ರ್ಮಳದೊಳಿಪ್ಪುದು ಸತ್ವಗುಣವದು।
ತಿಳಿಯಲೀಸುಜ್ಞಾನ ಸುಖಸಂಗಗಳ ಬಂಧನದಿ॥
ಬಳಲಿಸುವುದಾತ್ಮನನು ರಾಗದ।
ಬೆಳಸದೆನಿಪ ರಜೋಗುಣವು ಮನ।
ದೊಳಗೆ ತೃಷ್ಣಾಸಂಗವನು ಪುಟ್ಟಿಪುದು ಜೀವರಲಿ ॥ ೪ ॥

ಬಗೆಬಗೆಯ ಕರ್ಮಗಳ ಪಾಶದಿ।
ಬಿಗಿಯಿಸುವುದಜ್ಞಾನ ಮೂಲದೊ।
ಳೊಗೆದುತೋರ್ಪ ತಮೋಗುಣವು ಮೋಹವನು ಮುಸುಕಿಕ್ಕಿ॥
ನೆಗಳಿಸುವುದಾಲಸ್ಯ ನಿದ್ರಾ।
ದಿಗಳನಾಗುಣಗಳಲಿ ತಪ್ಪದೆ।
ಸೊಗವು ಗೈತ್ತವು ಮರವೆಗಳವಿಂತಿಹವು ಕ್ರಮವಿಡಿದು ॥ ೫ ॥

ಒಮ್ಮೆ ರಾಜಸ ತಾಮಸಂಗಳ।
ಹೆಮ್ಮನಂತೀಡಾಡಿ ಸತ್ವವ।
ದೊಮ್ಮೆ ಸತ್ವ ತಮೋಗುಣಂಗಳನಿಳಿಸಿ ರಾಜಸವು॥
ಒಮ್ಮೆರಾಜಸ ಸತ್ವಗಳ ಗೆ-।
ದ್ದುಮ್ಮಹದಿ ತಾಮಸವಿವಿಂತೊ।
ನ್ನೊಮ್ಮೆ ತಂತಮ್ಮೊಳಗೆ ತಾವೇ ಕೀಳುಮೇಲಹವು ॥ ೬ ॥

ಕೆಡಹಿ ರಜ ತಮಗಳನು ಸತ್ವದ।
ನಡೆಯದೇ ಮುಂದಾದುದೆನಲೀ।
ಯೊಡಲಿನಲಿ ಸರ್ವೇಂದ್ರಿಯ ದ್ವಾರಗಳು ಬೆಳಗುವವು॥
ಕುಡಿಯಿಡುವುದಾ ಜ್ಞಾನಲತೆಯಂ।
ತೆಡೆಗೊಳಲು ರಾಜಸದಗುಣದಿಂ।
ಕಡುತರದ ಲೋಭಪ್ರವೃತ್ತಿಯತುಷ್ಟಿ ಬಯಕೆಗಳು ॥ ೭ ॥

ಪುಟ್ಟುವುವು ತಮವಿಂತು ನಿಂದಡಿ ।
ಯಿಟ್ಟೊಡನೆ ಕರ್ತವ್ಯಮೂಢತೆ ।
ಪುಟ್ಟುವುದು ವ್ಯಾಮೋಹ ದುರ್ಮದ ಮರವೆಗಳು ಸಹಿತ ॥
ಕಟ್ಟಕಡೆಯೊಳಗೀ ತಮೋಗುಣಿ ।
ಬಿಟ್ಟುದೇಹವನೈದಿ ಪುನರಪಿ ।
ಪುಟ್ಟುವನಲಾ ಪಾರ್ಥಕೇಳೈ ಮೂಢಯೋನಿಯಲಿ ॥ ೮ ॥

ಸತ್ತವರು ರಾಜಸಗುಣೋನ್ನತಿ ।
ವೆತ್ತಸಮಯದಿ ಕರ್ಮಿಗಳ ಮನೆ ।
ಯತ್ತಲೇ ಜನಿಸುವರು ಸತ್ವೋತ್ಕರ್ಷಸಮಯದಲಿ ॥
ಸತ್ತೊಡುತ್ತಮ ತತ್ವವೇತ್ತರು ।
ಸತ್ತುಸೇರುವ ಪುಣ್ಯಲೋಕಗ ।
ಳತ್ತಲೇ ಸಾರುವರು ಸಂದೆಯವಿಲ್ಲವಿದರೊಳಗೆ ॥ ೬ ॥

ಕಲಿತ ಸಾತ್ವಿಕ ಕರ್ಮಫಲ ನಿ ।
ರ್ಮಲವು, ದುಃಖವು ರಾಜಸದೊಳಹ ।
ಫಲವದಿನ್ನಜ್ಞಾನವೇ ಫಲವಹುದು ತಾಮಸದಿ ॥
ಬಲಿದ ಸತ್ವದಿ ತಿಳಿವು, ರಜದಿಂ ।
ದಲಿ ಮುಗಿಯದತಿಯಾಸೆ, ತಮದಿಂ ।
ದಲಿ ವಿಮೂಢತೆ ವಿಭ್ರಮಾದಿಗಳಿಂತು ಪುಟ್ಟುವುವು ॥ ೧೦ ॥

ಮೇಲೆ ಸಗ್ಗಕೆ ಸತ್ವಗುಣದಸು ।
ಶೀಲರೈದುವರಿಲ್ಲಿ ರಾಜಸ ।
ಶೀಲರುಳಿವರು ಕೀಳ್ಗಿಲಸಕುಜ್ಜುಗಿಪತಾಮಸದ ॥
ಶೀಲರಿಗೆ ದುರ್ಗತಿಯ ತೂಗು ।
ಯ್ಯಾಲೆಯೇ ಗತಿಯೆನಲು ಗುಣಗಳ ।
ಲೀಲೆಗಳು ಬಣ್ಣನೆಗಳುಂಬವೆ ಪಾರ್ಥನೋಡೆಂದ ॥ ೧೧ ॥

ಗುಣಗಳಿಂದಿಂತಾಗಿ ತೋರ್ಪುವು ।
ಗುಣಗಳಿಂದಿನಿತೆಲ್ಲವಪ್ಪುವು ।
ಗುಣಗಳಿಂ ಮತ್ತೊಬ್ಬನಹ ನಿಜಕರ್ತನಿಲ್ಲಿವಕೆ ॥
ಗುಣಗಳೇ ಕಾರಣಗಳಾದರು ।
ಗಣಿಸದೌದಾಸೀನ್ಯದಿಂದಿದ ।
ನೆಣಿಸಿ ನೋಡುವನೋರ್ವನಿಹನಿಂತಿವುಗಳಿಂದುಳಿದು ॥ ೧೨ ॥

ಆ ಪರಮ ಪರತತ್ವನಹ ನಿ ।
ರ್ಲೇಪನನು ಕಂಡರಿದರೆನ್ನಯ ।
ರೂಪದೊಳಗೆಡೆಗೊಂಡು ಜನ್ಮಜರಾ ಮರಣವೆನಿಪ ॥
ಲೇಪನೆಗಳಿಂಬಿಡಿದ ಗುಣಗಳ ।
ಕೂಪದಿಂ ಮೇಲ್ಪೈದಿ ಸುಖದುಃ ।
ಖೋಪಶಮನವಿದೆನಿಸುವಮೃತತ್ವವನು ಪಡೆಯುವರು ॥ ೧೩ ॥

ದೇವದೇವೋತ್ತಮನೆ ಕೇಳಿ ।
ನ್ನಾವಲಕ್ಷಣಯುಕ್ತರವರಿ ।
ನ್ನಾವತೆರದಿಂದಿಹರು ತ್ರಿಗುಣಾತೀತರೆನಿಸುವರು ॥
ಆ ವಿಶಾಲ ಗುಣತ್ರಯವನಿ ।
ನ್ನಾವ ಪರಿಯಿಂದುತ್ತರಿಸುವರು ।
ದೇವಹೇಳಿನ್ನೊಮ್ಮೆ ಹೇಳೆಲೆದೇವ ವಿಸ್ತರಿಸಿ ॥ ೧೪ ॥

ಇಂದುಕುಲವರ ಸತ್ವದಿಂ ಪ್ರಭೆ ।
ಯೆಂದೆನ್ನೈಸೆ! ಪ್ರವೃತ್ತಿ ರಾಜಸ ।
ದಿಂದ, ತಾಮಸದಿಂದ ಮೋಹವು ಪುಟ್ಟಿತೆಂದೆನಲಾ ॥
ಹೊಂದಿದೊಡೆ ಹಗೆಗೊಳ್ಳದವುಗಳು ।
ಹೊಂದದಿದ್ದೊಡಪೇಕ್ಷಿಸದ ಬಗೆ ।
ಗುಂದದೊಂದೇ ತೆರೆದ ನಿಚ್ಚಳನೇ ಗುಣಾತೀತ ॥ ೧೫ ॥

ಹೊನ್ನು ಕಲ್ಮಣ್ಣುಗಳ ಭೇದವ ।
ಮನ್ನಿಸದ, ಫಲಕಾಗಿ ಕರ್ಮದ ।
ಬೆನ್ನಹಿಡಿಯದ, ಸಿಕ್ಕು ಸಂಕಟದಿಂದಲೆದೆಗೆಡದ ॥
ಇನ್ನಿವರು ಹಿತರಹಿತರವರೆಂ ।
ದೆನ್ನದಯಶವ ಯಶವ ಗಣಿಸದ ।
ತನ್ನ ತಾನರಿದಾತನೆ ಗುಣಾತೀತನರಿಯೆಂದ ॥ ೧೬ ॥

ಹಂಬಲಿಸದಾವುದನು ಸರ್ವಾ ।
ರಂಭವನು ಬಿಟ್ಟವನ ಜನದ ವಿ ।
ಡಂಬನದ ಮಾನಾಪಮಾನದ ನುಡಿಗಳಿಂ ಕೆರಳಿ ॥
ಸಂಭ್ರಮಿಸದೊಂದೇ ವಿಧಾನದಿ ।
ಕಾಂಬುವನ ಕಲ್ಯಾಣ ಶೀಲನ ।
ನೆಂಬರು ಗುಣಾತೀತನೆಂದರಿತವರು ಲೋಕದಲಿ ॥ ೧೭ ॥

ಸಾರಮತಿ ಕೇಳವ್ಯಯದ ವಿ ।
ಸ್ತಾರ ಶಾಶ್ವತಧರ್ಮದಮೃತಾ ।
ಗಾರದೈಕಾಂತಿಕ ಸುಖದ ಸುಸ್ಥಾನವಾನೆಂಬ ॥
ಸಾರವರಿದಂತೆನ್ನನವ್ಯಭಿ ।
ಚಾರ ಭಕ್ತಿಯೊಳೋಲಯಿಸುವರು ।
ಮೂರು ಗುಣಗಳ ಮೀರಿಮಿಕ್ಕಿದ ಗತಿಯನೈದುವರು ॥ ೧೮ ॥

ಸುಸ್ಥಿರತರ ಬ್ರಹ್ಮಭೂತಾ ।
ವಸ್ಥೆಯನು ಪಡೆಯುವರು ಪರತರ ।
ವಸ್ತುವೇ ತಾವಾಗಿ ಸಂಶಯವಿಲ್ಲವಿದಕೆಂದು ॥
ನಿಸ್ತುಲಿತ ನಿಜಮೂರ್ತಿಯೆನಿಪ ಸ ।
ಮಸ್ತದೇವವ್ರಾತ ಮಾಲಾ ।
ಮಸ್ತಕದಮಣಿ ಮಂಗಲಶ್ರೀಯರಸನುಸಿರಿದನು ॥ ೧೯ ॥

## ೧೫ನೆಯ ಸಂಧಿ

ಉತ್ತಮೋತ್ತಮನಖಿಳಲೋಕೋ ।
ತ್ಪತ್ತಿಕಾರಣನರ್ಜುನಗೆ ಪುರು ।
ಷೋತ್ತಮಾಹ್ವಯ ಯೋಗವನು ಪೇಳಿದನುವಿಸ್ತರಿಸಿ ।

ನರನೆ ಕೇಳಶ್ವತ್ಥವೊಂದಮು ।
ತೆರದಿ ಬುಡಮೇಲಾಗಿ ಕೀಳ್ಗೆ ।
ಪ್ಪಿರುವ ಕಿರುಗೊಂಬುಗಳ ಛಂದಸ್ಸುಗಳ ಪರ್ಣಗಳ ॥
ಮಿರುಗಿನಿಂ ಕೂಡಿರುವ ಮರತಾ ।
ನಿರುವುದಳಿಯದೆ ಶಾಶ್ವತದೊಳವ ।
ರಿರವನರಿವರು ವೇದವೇತ್ತರೆನಿಪ್ಪರೆಲ್ಲವರು ॥ ೧ ॥

ಚಿಗುರುಗಳೆ ವಿಷಯಗಳದಕ್ಕಾ ।
ತ್ರಿಗುಣಗಳೆ ಬೆಳೆಬೆಳೆದ ಪ್ರಥುಶಾ ।
ಖೆಗಳು ಮೇಲಕೆ ಕೆಳಕನೆಲ್ಲವು ಹಬ್ಬಿಹರಡಿಹವು ॥
ಬಗೆಯೆ ಕರ್ಮಗಳೆನಿಪದರ ಬೇ ।
ರುಗಳು ನೀಳ್ದಿಳಿದಿಳಿದು ಮಾನಿಸ ।
ರುಗಳ ಲೋಕವ ಮುಟ್ಟಿ ಪರಿವರಿಗೊಂಡು ಪರಡಿಹವು ॥ ೨ ॥

ರೂಢಮೂಲವನದನು ಕಂಡೆಡೆ ।
ಯಾಡಿ ಬುಡ ನಡು ಕಡೆಗಳೆಂತೆಂ ।
ದಾಡುವವರಾರಿಲ್ಲವಿಲ್ಲೀ ಮರ್ತ್ಯಲೋಕದಲಿ ॥
ನೋಡಿಮನದಿಂದದರ ರೂಪವ ।
ಸಾಡಿತೋರುವ ಸಾಹಸದಿ ಮಾ ।
ತಾಡುವೊಡೆ ಸಾಧನಗಳಿಲ್ಲೆಲೆ ಪಾರ್ಥಕೇಳೆಂದ ॥ ೩ ॥

ಸ್ವರತೆಯಿಂದಲಸಂಗ ಖಡ್ಗವ ।
ಧರಿಸಿ ಕಡಿದಿಕ್ಕುವುದು ಶೀಘ್ರ ।
ಮರವನಾಮೇಲೀ ಪುರಾತನವಹ ಪ್ರವೃತ್ತಿಯನು ।
ಪರಿಶೋಧ್ಯನೆನಿಪ್ಪ ಪುರುಷನ ।
ನರಿವ ಜನನಿಯ ಜಠರದೊಳಗಂ ।
ಮರಳಿ ಜನಿಸದ ಪಥವ ಕಂಡಾಪಥದಿ ನಡೆಯುವುದು ॥ ೪ ॥

ಮಾನಸಕ್ಷೇತ್ರದಲಿ ಬೆಳೆದಿಹ ।
ನಾನ ಮೋಹಾಸಕ್ತಿಯಿಂಬೀ ।
ಕಾನನವ ಕಡಿದೀರುತಗ್ಗಿನ ದ್ವಂದ್ವಗಳನವೆದು ॥
ಜ್ಞಾನಬೀಜವಬಿತ್ತಿಯಾತ್ಮ ।
ಧ್ಯಾನವೆನಿಸುವ ನೀರೆರೆದು ಸು ।
ಸ್ಥಾನವಪ್ಪ್ವಯಫಲವ ಪಡೆದಲ್ಲಿ ಸೊಗವಿಹುದು ॥ ೫ ॥

ಹೊಂದಿಸಂದವರಾವ ನೆಲೆಯಿಂ ।
ಹಿಂದೆಮೊದಲಿದ್ದೆಡೆಗೆ ಬಾರದೆ ।
ನಿಂದು ನಿಲ್ಲುವರಾನೆಲೆಯೆ ನೋಡೆನ್ನನಿಜಧಾಮ ॥
ಅಂದವಹ ಸುಪ್ರಭೆಯದಕೆ ಸೂ ।
ರ್ಯೇಂದು ವಹ್ನಿಗಳಿಂಬವುಗಳಿಂ ।
ಬಂದುದಲ್ಲ ಸ್ವಯಂಪ್ರಭಾಮಯವೆನಿಪುದಾಸ್ಥಾನ ॥ ೬ ॥

ನಿಂದುಪ್ರಕೃತಿಯೊಳೊಪ್ಪಿರುವ ರಸ ।
ಗಂಧ ಶಬ್ದ ಸ್ಪರ್ಶ ರೂಪಗ ।
ಳೆಂದು ಪೇಳುವ ವಿಷಯಪಂಚಕಗಳನು ಮನಸಹಿತ ॥
ತಂದೆಳೆದು ಭೌತಿಕಶರೀರವ ।
ಹೊಂದಿ ಮರ್ತ್ಯಜೀವಲೋಕದಿ ।
ನಂದುಹುಟ್ಟುವ ಜೀವನವನೆನ್ನಂಶ ನೋಡೆಂದ ॥ ೭ ॥

ರಸನೆ ತ್ವಕ್ಶ್ರೋತ್ರಾಕ್ಷಿ ನಾಸಿಕ ।
ವಿಸರದೊಡನಿದ್ದೀ ವಿಷಯಸುಖ ।
ರಸವನುಂಬುವನವನು ಮತ್ತವುಗಳನುಲೆಕ್ಕಿಸದೆ ॥
ನುಸುಳಿ ಪೂವೊಳವೊಕ್ಕು ಪರಿಮಳ ।
ಪಸರವನು ಕೊಂಡೊಯ್ವ ಮಂದ ।
ಶ್ವಸನದಂತೀ ದೇಹದಿಂದುಯ್ದುಯ್ದುವವನವನು ॥ ೮ ॥

ಎದ್ದು ಹೋಹನನಿಂತು ದೇಹದೊ ।
ಳಿದ್ದು ಗುಣದಿಂ ವಿಷಯಸುಖವನು ।
ಹೊದ್ದುವನನಾಜ್ಞಾನ ನೇತ್ರಗಳಿಂದ ಯತ್ನದಲಿ ॥
ಸಿದ್ಧಿ ಹೊಂದಿದ ಯೋಗಿಗಳು ತಾ ।
ವಿದ್ದು ಕಾಂಬರು ಹೊರತು ಮೂರ್ಖರು ।
ಬುದ್ಧಿ ಶೂನ್ಯರು ಜ್ಞಾನಹೀನರು ಕಾಂಬರೆಂತವನ ॥ ೯ ॥

ದೆಸೆಯನೆಲ್ಲವ ಬೆಳಗಿತೋರುವ ।
ಬಿಸುಗದಿರನೊಳಗಗ್ಗಿಯೊಳಗೀ ।
ಸಸಿಯೊಳಗೆ ಕಾಂಬಾಬೆಳಕೆ ನೋಡೆನ್ನತೇಜವದು ॥
ರಸೆಯ ಸೇರ್ದೀ ಸಕಲಭೂತ ।
ಪ್ರಸರವೆಲ್ಲವನೆನ್ನ ತೇಜದಿ ।
ಹೊಸೆದು ನಿಂದಿಹೆನಾಂ ರಸಾತ್ಮಕನೆನಿಪ ಶಶಿಯೆನಿಸಿ ॥ ೧೦ ॥

ಪೊರೆವೆನಿನಿತು ವನಸ್ಪತಿಗಳನು ।
ನರನೆ ಕೇಳಿನ್ನೀಶರೀರದೊ ।
ಳಿರುವೆನಾಂವೈಶ್ವಾನರಾಗ್ನಿಯರೂಪದಿಂದಲ್ಲಿ ॥
ಮೆರೆವ ಪ್ರಾಣಾಪಾನಗಳ ಜತೆ ।
ವೆರಸಿ ಪ್ರಾಣಿಗಳುಂಬ ನಾಲ್ಕುಂ ।
ತೆರವೆನಿಸುವನ್ನವನು ಜೀರ್ಣಂಗೊಳಿಪೆ ನೋಡೆಂದ ॥ ೧೧ ॥

ವೇದವೇತ್ತನೆನಿಪ್ಪ ನಾನೇ ।
ವೇದಮುಖದಿಂ ತಿಳಿಯ ತಕ್ಕವ ।
ನಾದವನು ವೇದಾಂತವೇದ್ಯನು ಪಾರ್ಥಕೇಳಾನು ॥
ಭೇದವಿರದೆಲ್ಲವರ ಚಿತ್ತದ ।
ವೇದಿಕೆಯಮೇಲಿರ್ದು ಸ್ಮೃತಿಯನು ।
ಬೋಧವನು ತರ್ಕವನು ಪುಟ್ಟಿಸುವವನೆ ನಾನೆಂದ ॥ ೧೨ ॥

ನರನೆಕೇಳು ಕ್ಷರಾಕ್ಷರಗಳಿಂ ।
ದೆರಡುತೆರವೀ ಲೋಕದೊಳಗಿರು ।
ತಿರುವವವುಗಳೊಳಳಿಯಲಿಪ್ಪ ಸಮಸ್ತಭೂತಗಳು ॥
ಕ್ಷರಗಳವು ಮತ್ತಳಿಯದಿಹುದ ।
ಕ್ಷರವದೇಕೂಟಸ್ಥವಲ್ಲದೆ ।
ಪುರುಷನುತ್ತಮ ನೋರ್ವನಿಹನಿಂತಿವುಗಳಿಂದುಳಿದು ॥ ೧೩ ॥

ಆತನೇಪರಮಾತ್ಮನವ್ಯಯ ।
ನಾತನೇ ಮೂಲೋಕದೊಳಗಿ ।
ದ್ದಾತನೇ ಪೋಷಿಸುವನೆಲ್ಲರನಾವುದನು ಬಿಡದೆ ॥
ಆತನೆನಲು ಕ್ಷರಾಕ್ಷರಗಳಿನ ।
ತೀತನಹನದರಿಂದ ವೇದ ।
ವ್ರಾತಕೊಂಡಾಡುವುದು ಪುರುಷೋತ್ತಮನೆನುತ್ತವನ ॥ ೧೪ ॥

ಮತ್ತವನೆ ಬಳಕೆಯಲಿ ಶ್ರೀಪುರು ।
ಷೋತ್ತಮನು ತಾನಾದನಾ ಪುರು ।
ಷೋತ್ತಮನೆ ನಾನೆಂದರಿದು ಸರ್ವಜ್ಞನೆಂದೆನಿಸಿ ॥
ಚಿತ್ತಶುದ್ಧಿಯ ಹೊಂದಿ ಮೋಹನಿ ।
ವೃತ್ತನಾಗಿಹನಾವನಾ ಪುರು ।
ಷೋತ್ತಮನು ಭಜಿಸುವನು ಸರ್ವವಿಧಂಗಳಿಂದೆನ್ನ ॥ ೧೫ ॥

ಗೂಢದೊಳಗತಿ ಗೂಢವಿದನಾ।
ನಾಡಿತೋರ್ದೆನು ನಿನಗಿದನು ವೈ।
ಗೂಡಿಸುವರಾರವರಹೆರು ಕೃತಕೃತ್ಯರೆಂಬುದಕೆ ॥
ಬೇಡಸಂಶಯವೆಂದು ಗರುಡಾ।
ರೂಢ ನಿರ್ಮಲ ಸತ್ವಚಿತ್ತ ನಿ-।
ಗೂಢನಹ ಮಂಗಲಮಹಾಶ್ರೀರಮಣನುಸಿರಿದನು ॥



## ೧೬ನೆಯ ಸಂಧಿ

ಸೂ ॥ ಇಂಪಿನಿಂ ದೈವಾ ಸುರಗಳ ಪ।
ರಂಪರೆಗಳ ವಿಭೇದವನು ಮಾ।
ರಾಂಪ ಮದಮುಖವರ್ಗನಿಗ್ರಹನೊರೆದನರ್ಜುನಗೆ ॥

ವಿಮಲಮತಿ ಕೇಳ್ನಿರ್ಭಯತೆ ನಿ।
ರ್ಮಮತೆ ಸಾತ್ವಿಕವೃತ್ತಿ ಸರಲತೆ।
ದಮ ತಪ ಸ್ವಾಧ್ಯಾಯ ಯಜ್ಞತ್ಯಾಗ ಪಾತ್ರತ್ವ ॥
ಸಮತೆ ಸತ್ಯ ಶುಚಿತ್ವ ಮಾರ್ದವ।
ಶಮ ನಿಗರ್ವವಿವೆಲ್ಲವೆಲೆ ವಿ।
ಕ್ರಮಿಯೆ ದೈವೀಸಂಪದದಿ ಪುಟ್ಟಿದರಿಗೊದಗುವವು ॥ ೧ ॥

ಮತ್ತಹಿಂಸೆಯಕೋಪ ಧೃತಿ ದಯೆ।
ಚಿತ್ತಶುದ್ಧತೆ ಶಾಂತಿ ವಿಷಯನಿ।
ವೃತ್ತತೆಯಪೈಶುನ್ಯಗಳು ಸಹಿತೀಗುಣಂಗಳೆನೆ ॥
ದತ್ತದೈವಗುಣಂಗಳಾಸುರ।
ದತ್ತಗುಣಗಳವಾಸುರೀ ಸಂ।
ಪತ್ತಿಯಿಂ ಪುಟ್ಟಿದರಿಗೊದಗುವವವುಗಳಾವುವೆನೆ ॥ ೨ ॥

ದುರಭಿಮಾನ ಕ್ರೋಧ ದರ್ಪೋ।
ತ್ಕರ ಕಠೋರತೆ ದಂಭಮುಂತಾ।
ಗಿರುವ ಗುಣಗಳು ಬಂಧಕಗಳಿವು ಜೀವಿತಾತ್ಮರಿಗೆ ॥
ಒರೆದ ದೈವಗುಣಂಗಳೆನಲೆ।
ಲ್ಲರಿಗೆ ಮೋಕ್ಷಪ್ರದಗಳಿನ್ನೆಲೆ।
ನರನೆ ದೈವೀಸಂಪದುದ್ಭವನೈಸೆ! ನೀನೆಂದ ॥ ೩ ॥

ಪುಟ್ಟಿದೀ ಜೀವರುಗಳೊಳಗಳ ।
ವಟ್ಟು ತೋರುವ ದೈವಗುಣದ ವಿ ।
ಶಿಷ್ಟತೆಯದಂತಿರಲಿ ಪೇಳ್ವಾಸುರಗುಣಂಗಳನು ॥
ತೊಟ್ಟುನಿಂದವರೆನಲು ಮೊದಲಿಗೆ ।
ಬಿಟ್ಟುಸತ್ಯಾಚರಣೆಗಳನಡಿ ।
ಯಿಟ್ಟುನಡೆವರಧರ್ಮ ಮಾರ್ಗದಿ ಪಾರ್ಥಕೇಳೆಂದ ॥ ೪ ॥

ನೋಡ ಬಂದರ ಹಳಿದು ಹಂಗಿಸಿ ।
ಬೇಡಬಂದರ ಬೈದು ಭಂಗಿಸಿ ।
ನೋಡದಾವುದನವರು ಬಗೆಗಂಡಂತೆ ಮಾಡುವರು ॥
ಆಡುವೆಲ್ಲರ ದೇವನಾವೆಡೆ ।
ಯಾಡಿನಿಂದನು ಕಾಣನೇಕೇಂ ।
ಮಾಡಿಗೊಂಡಿಹನಿಹನೆ ಪುಸಿಯುವನಿಪ್ಪುದೆಂದಪರು ॥ ೫ ॥

ಇಪ್ಪುದಿನ್ನೆಮ್ಮನ್ನರಿಗೆ ಸೊಗ ।
ಕಿಪ್ಪುದಲ್ಲದೆ ದೈವನಿರ್ಮಿತ ।
ವಪ್ಪುದೆನೆ ಹುರುಳುಂಟೆ ಕಾಮವೆ ಹೇತುವಿದಕೆಲ್ಲ ॥
ಅಪ್ಪುದೊಂದರಿನೊಂದೆನುವ ಮುದು ।
ಮುಪ್ಪುಗರ ಮಾತೇಕೆ ಕಂಡಿಂ ।
ತೊಪ್ಪಿತೋರ್ಪದಕೇಕೆ ಸಕ್ಕಿಯ ಮಾತದೆಂದಪರು ॥ ೬ ॥

ಒಲ್ಲೆವೆಂದನುಭವಿಸಲಿಪ್ಪುದ ।
ನಿಲ್ಲಿ ಬಿಟ್ಟಂತಿರಲು ಮಾನಿಸ ।
ರಲ್ಲಿಪುಟ್ಟಿದುದೇಕೆ ಮರನಂತೊಗೆದು ಸತ್ತಪುದು ॥
ಬಲ್ಲತನವಲ್ಲೆಂಬ ಮಾತಿನ ।
ಮಲ್ಲರಲ್ಲದ ಸಲ್ಲದೊಲ್ಲದ ।
ಹೊಲ್ಲೆಹದ ಕೀಳ್ಗಜ್ಜವುಜ್ಜುಗವಾಗಿ ಬಾಳುವರು ॥ ೭ ॥

ದುಷ್ಟರವರು ದುರಾತ್ಮರತಿಕೋ ।
ಪಿಷ್ಠುರುರುವಂಚಕರು ಶೀಲ ।
ಭ್ರಷ್ಟರೂರ್ಜಿತ ದಂಭದರ್ಪಾನ್ವಿತರು ದುರ್ಭಗರು ॥
ನಿಷ್ಠುರರು ನಿರ್ಘೃಣರು ಲೋಭಾ ।
ವಿಷ್ಟರು ಕನಿಷ್ಟರು ಸದಾ ಗ ।
ರ್ವಿಷ್ಟರೆನಿಸುವರವರನಿನ್ನೇನೆಂಬೆನೆಲೆಪಾರ್ಥ ॥ ೮ ॥

ಮುಳುಗಿ ಕಾಮಸುಖೋಪಭೋಗಂ ।
ಗಳಲಿ ನಾನಾಚಿಂತನೆಗಳಿಂ ।
ದಳಿವನಕ ಕಡೆಗಾಣದಾಶಾಪಾಶದಲಿ ಸಿಲುಕಿ ॥
ಕಳವು ಕೊಲೆ ಹಾದರಗಳೆಂದೇ ।
ಕಳುಕು ವಿತ್ತಾರ್ಜನೆಯೆ ಜೀವಿತ ।
ದೊಳವದೇ ಸರ್ವಸ್ವವೆಂಬರು ಪಾರ್ಥಕೇಳೆಂದ ॥ ೯ ॥

ಗಳಿಸಿದೆನು ನಾನನಿತ ನಿನ್ನೇಂ ।
ಗಳಿಸಲಿಹೆನಿನ್ನಿನಿತನೆಂತುಂ ।
ಗಳಿಸಲಾಪೆನು ಲಕ್ಷವಾರದು ದ್ರವ್ಯಸಂಚಯದಿ ॥
ಒಳಗಿಹುದು ಸಾಲದೊಡೆ ಜೇಕಾ ।
ದುಳಿತ ಮುಂದಿಹುದಿನ್ನು ಬದುಕಿ ।
ದ್ದುಳಿವ ಕಾಲದಿ ಮುಗಿಯದೆಂಬರು ಪಾರ್ಥಕೇಳೆಂದ ॥ ೧೦ ॥

ಕೊಟ್ಟಮಾತನು ನಡಸರೊಂದೇ ।
ಹೊಟ್ಟೆಯಲಿ ಹುಟ್ಟದುದನೆಣಿಸರು ।
ದಿಟ್ಟರಾವೆಂಬೊಂದು ಕೊಳೆಹೆಮ್ಮೆಯನು ಬಿಡಗೊಡರು ॥
ಕೊಟ್ಟುದನು ಕೊಡಲೊಲ್ಲರುಳಿದುಂ ।
ಡುಟ್ಟು ಸೊಗವನು ಕಾಣಲಿಹೆರನು ।
ಹೊಟ್ಟೆಗಿಚ್ಚಿನ ಹೊಗೆಯಹೆರಡಿಸಿ ಕಂದೆರೆಯಗೊಡರು ॥ ೧೧ ॥

ಕನಕ ಭೂಶಣ ರತ್ನ ಧನ ವಾ ।
ಹನ ನಿಕೇತನ ದಾಸ ದಾಸೀ ।
ಜನ ಕಳತ್ರಕ್ಷೇತ್ರಗಳಲಾರೆನ್ನ ಹೋಲುವರು ॥
ಅನುದಿನವು ಸುಖಿಯಾನಲಾ ಸಿ ।
ದ್ಧನು ಕುಲೀನನು ಭೋಗಿಯಾನಿ ।
ನ್ನೆನಗೆ ಕುಂದೇನೆನ್ನ ಹೊರತೀಶ್ವರನದಾರಿನ್ನು ॥ ೧೨ ॥

ದಾನವಿತ್ತೆನು ಯಜ್ಞವನು ಸು ।
ಮ್ಮಾನದಿಂ ಮಾಡಿದೆನು ಬಂದವ ।
ರೇನುಕಮ್ಮಿಯೆ ದಣಿದರುಂಡುಂಡಿಲ್ಲಿ ಬಹುಜನರು ॥
ನಾನಲಾ ನಾನೆಂಬರವರವ ।
ಸಾನವರಿಯರು ದಾಂಭಿಕರು ಮತಿ ।
ಹೀನರೈದುವರವರು ನಿರಯದ್ವಾರವನು ಕಡೆಗೆ ॥ ೧೩ ॥

ಉಕ್ಕಿ ಧನಮದದಿಂದ ಹೆಸರಿಗೆ ।
ತಕ್ಕ ಯಜ್ಞವಿದೆಂದು ವಿಧಿಯನು ।
ಮಿಕ್ಕಿ ಮನಬಂದಂತಹಂಕಾರದಲಿ ನಡಸುವರು ॥
ಸೊಕ್ಕಿಪರರವರಂತರಂಗದ ।
ಹಕ್ಕೆಯಲಿ ನಿಂದಾತ್ಮನೆನ್ನನು ।
ಲೆಕ್ಕಿಸದೆ ಹಗೆಗೊಂಬರವರು ನರಾಧಮರು ಪಾರ್ಥ ॥ ೧೪ ॥

ಆಸುರೀಯೋನಿಯಲಿ ನಾನಾ ।
ದೋಸಿಗರ ಕೆಡಹುವೆನು ಪುಟ್ಟುವ ।
ರೇಸುಜನ್ಮವನಲ್ಲಿ ಬಳಿಕೆಂದಾರು ಕಾಂಬುವರು ॥
ಗಾಸಿಯಹೆರವರಂತು ದುಃಖಾ ।
ವಾಸವಹೆ ದುರ್ಗತಿಯ ಗತಿಯೇ ।
ಮೊಸಲಾಗಿಹುದವರ್ಗೆ ಕಡೆಗೆಲೆ ಪಾರ್ಥ ಕೇಳೆಂದ ॥ ೧೫ ॥

ಕೊಲ್ಲಲಿಹವಾತ್ಮನನು ಮೂದೆರ ।
ದಲ್ಲಿ ಕಾಮಕ್ರೋಧಲೋಭಗ ।
ಳಿಲ್ಲಿ ಕೇಳವು ಪಾರ್ಥ ನಿರಯದ್ವಾರವವುಗಳನು ॥
ಮೆಲ್ಲನುಳಿದಪುದುಳಿವವನು ಮ ।
ತ್ತಿಲ್ಲಿ ಶ್ರೇಯೋಭಾಗಿಯಪ್ಪನು ।
ಸಲ್ಲಲಿತ ಸದ್ಗತಿಯ ಪಡೆವನು ಕಡೆಗೆ ಕೇಳೆಂದ ॥ ೧೬ ॥

ಸಾರಿಪೇಳುವ ಶಾಸ್ತ್ರವಿಧಿಯನು ।
ಮೀರಿ ಮನಬಂದಂತೆ ನಡೆವಾ ।
ಚಾರಹೀನರು ಕಾಂಬರೆಂತೈ ಸಿದ್ಧಿಗಿದ್ಧಿಯನು ॥
ಸೂರೆಗೊಂಬರದೆಂತು ಸೌಖ್ಯದ ।
ಸಾರವನು ಪರಗತಿಯ ಮೆಟ್ಟಲ ।
ನೇರಲುಂಟೇ ಪಾರ್ಥ ನೀನೇ ನೋಡಿಗೊಳ್ಳೆಂದ ॥ ೧೭ ॥

ನರನೆ ಕಾರ್ಯಾಕಾರ್ಯಗಳ ಬಗೆ ।
ಯರಿದು ಚಿತ್ತದಿ ಶಾಸ್ತ್ರವಿಧಿಯನು ।
ಮರೆಯದಾಮರಣಾಂತ ಮಾಳ್ಪೆಲ್ಲವನು ಮಾಡುವುದು ॥
ಪರಮ ಶ್ರೇಯಸ್ಕರವಿದೆಂದಾ ।
ದರದಿ ಗುಣನಿಧಿ ಮಂಗಲಶ್ರೀ ।
ಯರಸ ಪಂಕಜನಾಭ ಪಾವನರೂಪನುಸಿರಿದನು ॥ ೧೮ ॥

—*○*—

## ೧೭ನೆಯ ಸಂಧಿ

ಸೂ ॥ ನಯವಿದನೆ ಕೇಳೆಂದು ಶ್ರದ್ಧಾ ।
ತ್ರಯ ವಿಭಾಗವನೊಲಿದು ಪಂಕಜ ।
ನಯನನಭಿವರ್ಣಿಸಿದನುಚಿತೋಕ್ತಿಯಲಿ ಪಾರ್ಥಂಗೆ ॥

ಯದುಕುಲೋತ್ತಮ ಕೇಳು ಶಾಸ್ತ್ರದ ।
ವಿಧಿಯ ಬಿಟ್ಟರು ಬಿಡದೆ ಶ್ರದ್ಧಾ ।
ವಿಧಿಯನದನೇ ಹಿಡಿದು ನಡಸುವ ಯಜನ ಕರ್ಮಿಗಳ ॥
ವಿಧವಿಧದ ನಿಷ್ಠೆಗಳವಿನ್ನಾ ।
ವುದರೊಳೆಡೆಗೊಂಡಪವು ಪೇಳಾ ।
ವಿದಿತ ಸತ್ವರಜಸ್ತಮೋಗುಣವೆಂಬ ಮೂರರಲಿ ॥ ೧ ॥

ಭಾರತನೆ ಕೇಳಿನ್ನು ಪೇಳಿದ ।
ಮೂರುಗುಣಕನುಕರಿಸಿ ಶ್ರದ್ಧೆಯು ।
ಮೂರುತೆರದಿಂ ಕಾಂಬುದೀ ಪ್ರಾಣಿಗಳ ಕೂಟದಲಿ ॥
ತೋರುವವುಗಳೊಳೀ ಮನುಷ್ಯರು- ।
ದಾರ ಶ್ರದ್ಧಾಮಯರವರೊಳಿ ।
ನ್ನಾರ ಶ್ರದ್ಧೆಯದೆಂತು ತಾವಿಹೆರಂತದನು ಬಿಡದೆ ॥ ೨ ॥

ಯಜಿಸುವರು ಸಾತ್ವಿಕರು ದೈವ ।
ವ್ರಜಗಳನು, ರಾಕ್ಷಸರ ಯಕ್ಷರ ।
ಯಜಿಸುವರು ರಾಜಸರು ಭೂತಪ್ರೇತಗಳಕುರಿತು ॥
ಯಜಿಸುವರು ತಾಮಸರು ದಂಭ ।
ಧ್ವಜರು ಚೇತಃಶೂನ್ಯರೆನಿಸುವ ।
ಕುಜನವರ್ಗದಿ ಕೆಲರಹಂಭಾವದಲಿ ಮೈಮರೆದು ॥ ೩ ॥

ಬದ್ಧ ಕಂಕಣರಾಗಿ ಶಾಸ್ತ್ರವಿ।
ರುದ್ಧವೆನಿಸುವ ಘೋರಕರ್ಮದ।
ಸಿದ್ಧಿಗೋಸುಗ ಕಾಮರಾಗಂಗಳ ಬಲೋತ್ಕರದಿ ॥
ಎದ್ದುನಿಂದವರೀ ಶರೀರದೊ।
ಳಿದ್ದ ಭೂತಗ್ರಾಮಗಳನಂ।
ತಿದ್ದವನ ಸಹಿತೆನ್ನನುಂ ಪೀಡಿಸುವರನುದಿನದಿ ॥ ೪ ॥

ಮಾನಧನ ಕೇಳಿನ್ನು ಪೇಳ್ದೀ।
ಮಾನವರು ಮೂದೆರವವಂದಿರ।
ದಾನ ಯಜ್ಞ ತಪಂಗಳಿನ್ನವರನ್ನ ಪಾನಗಳು ॥
ತಾನೆ ಮೂದೆರವವರ ಶ್ರದ್ಧಾ।
ಮಾನವಿಪ್ಪಂತಪ್ಪುದಿನ್ನನು।
ಮಾನಗೊಳಬೇಡದನೆ ಪೇಳುವೆನೀಗ ತಿಳಿವಂತೆ ॥ ೫ ॥

ಮೃದು ಸರಸ ಸುಸ್ನಿಗ್ಧ ಸುಸ್ಥಿರ।
ಮಧುರ ರಮ್ಯ ಮನೋಜ್ಞ ತೋಷ।
ಪ್ರದವೆನಿಸುವಾಹಾರ ಸಾತ್ವಿಕರಿಷ್ಟವಾಗಿಹುದು ॥
ಅದು ಬಲವನಾರೋಗ್ಯ ಭಾಗ್ಯವ।
ನದು ಪರಮ ಸೌಖ್ಯವನು ಸತ್ವವ।
ನದು ಕೊಡುವುದೆಲೆ ಪಾರ್ಥ ರಾಜಸರಿರವ ಕೇಳಿಂದ ॥ ೬ ॥

ಉಪ್ಪುಹುಳಿ ಕಾರಗಳ ಬಿರುಸಿಂ।
ದಿಪ್ಪ ಸುಟ್ಟನೆಸುಡುವ ತೆಂಗಾಯ್।
ಚಿಪ್ಪನಗಿವಂತಪ್ಪ ಬಾಯೂರಿಸುವ ಹೊಟ್ಟೆಯಲಿ ॥
ಗಪ್ಪುಗವ್ವನೆ ಕಿಚ್ಚನೆಬ್ಬಿಸ।
ಲಿಪ್ಪ ತಿನಿಸೇ ಸೊಗಸವರ್ಗಿ।
ನ್ನಪ್ಪುದವರಿಂ ರೋಗ ದುಃಖಾದಿಗಳ ಸಂಜನನ ॥ ೭ ॥

ತಣಿದು ತಂಗೂಳಾದ ಹದಗೆ ।
ಟ್ಟೊಣಗಿ ನೀರಸಗೊಂಡ ಹಳಸಿದ ।
ಮಣದೊಳಿಡಿದಪವಿತ್ರತರವಪ್ಪೆಂಜಲಾಗಿರುವ ॥
ಉಣಿಸೆ ಸುಪ್ರಿಯವಹುದು ತಾಮಸ ।
ಗುಣದ ಶ್ರದ್ಧಾತ್ಮರಿಗೆಲೇ ಫಲು ।
ಗುಣನೆ ನಿದ್ರಾಲಸ್ಯ ಮರವೆಗಳೊಗೆವವದರಿಂದ ॥ ೮ ॥

ಸಂಗಿಯಾಗದೆ ವಿಧಿ ವಿಧಾನವ ।
ಭಂಗಗೊಳಿಸದೆ ತನ್ನಕರ್ತ ।
ವ್ಯಾಂಗವೆಂದೇ ಮಾಳ್ಪ ಯಜ್ಞವು ಸಾತ್ವಿಕವು ಪಾರ್ಥ ॥
ಸಂಗಿಯಪ್ಪುದೆ ರಾಜಸವು ಮಂ ।
ತ್ರಂಗಳಿಲ್ಲದ ದಕ್ಷಿಣಾನ್ನಾ ।
ದ್ಯಂಗಹೀನದ ಶ್ರದ್ಧೆಯಳಿದಾ ಯಜ್ಞ ತಾಮಸವು ॥ ೯ ॥

ದೇವ ವಿಪ್ರ ಪ್ರಾಜ್ಞ ಗುರುಜನ ।
ಸೇವೆ ಹಿಂಸಾತ್ಯಾಗ ನಿರ್ಮಲ ।
ಭಾವಕೊಪ್ಪುವ ನಡತೆ ಸ್ವಚ್ಛತೆ ಬ್ರಹ್ಮಚಾರಿತ್ವ ॥
ತಾವೆ ಕಾಯಿಕತಪವು ಪೆರರೆದೆ ।
ನೋವುಗೊಳಿಸದ ಹಿತದ ಸತ್ಯದ ।
ಭಾವಶುದ್ಧ ಪ್ರಿಯವಚನವದು ವಾಚಿಕದ ತಪವು ॥ ೧೦ ॥

ಸ್ಥಿರತರ ಸುಸಂಕಲ್ಪ ಸೌಮ್ಯತೆ ।
ಸರಲ ಭಾವನೆಯಾತ್ಮನಿಗ್ರಹ ।
ಪರಿಮಿತಿಯ ನೆಡೆಗೊಂಡ ಭಾಷಣ ಸುಪ್ರಸನ್ನತ್ವ ॥
ನರನೆ ಕೇಳ್ಮಾನಸಿಕ ತಪವಿಂ ।
ತೊರೆಫವುಗಳನು ನಿಸ್ಪೃಹತ್ವದೊ ।
ಳಿರಕಗೊಂಡಾಚರಿಸಲಾ ತಪವಹುದು ಸಾತ್ವಿಕವು ॥ ೧೧ ॥

ತಿರವಿರದ ಚಂಚಲದ ದಂಭೋ ।
ತ್ಕರದ ಸತ್ಕಾರವನು ಪಡೆವಾ ।
ತುರದ ತಪವದು ರಾಜಸವು ತಿಳಿ, ಮೂಢಮತಿಯಾಗಿ ॥
ಅರಿಯದೇನುಮನಾತ್ಮಪೀಡಾ ।
ಕರದ ಪರಹಿಂಸಾಗ್ರಹದ ದು ।
ರ್ಧರ ತಪವನಾಚರಿಸಲಾ ತಪವಹುದು ತಾಮಸವು ॥ ೧೨ ॥

ದೇಶ ಕಾಲ ಕ್ಷೇತ್ರ ಪಾತ್ರವಿ ।
ಶೇಷತೆಗಳನು ನೋಡಿ ಪ್ರತಿಫಲ
ದಾಶೆಯಿಲ್ಲದೆ ತನ್ನಕರ್ತವ್ಯಾಂಗವೆಂದರಿದು ॥
ತೋಷದಿಂದೊಲಿದೀವ ದಾನವಿ ।
ಶೇಷವದು ಸಾತ್ವಿಕವು ಪ್ರತಿಫಲ ।
ದಾಶೆಯಿರಲಾ ದಾನ ರಾಜಸ ದಾನವೆನಿಸುವುದು ॥ ೧೩ ॥

ಸ್ಥಾನ ಕಾಲಂಗಳನು ನೋಡದೆ ।
ತಾನದಾರಾನಾರೆನಿಸುವೀ
ಜ್ಞಾನವಿಲ್ಲದೆ ಮಾನದೋರದನಾದರದಿ ಕರೆದು ॥
ದಾನವಿದಕೊಳ್ಳೆಂದವನನಪ ।
ಮಾನಿಸುತ ತೆಗೆದಿತ್ತೊಡಂತಾ ।
ದಾನ ತಾಮಸದಾನವೆನಿಪುದು ಪಾರ್ಥಕೇಳೆಂದ ॥ ೧೪ ॥

ವೀರಕೇಳೋಂತತ್ಸತೆಂಬುದ- ।
ಪಾರಮಹಿಮಾ ಸಾಗರನ ಗುರಿ ।
ದೋರಿ ನುಡಿಯುವ ಗುರುತು ಬ್ರಾಹ್ಮಣ ವೇದ ಯಜ್ಞವಿವು ॥
ಮೂರೊಗೆದವದರಿಂದ ಪೂರ್ವದಿ ।
ಸಾರವಿದರಹೆ ಸುಗುಣರಿಂ ವಿ ।
ಸ್ತಾರಗೊಂಡುವು ಮತ್ತೆ ದಾನ ತಪಃ ಕ್ರಿಯಾದಿಗಳು ॥ ೧೫ ॥

ಆದುವೀ ಶಾಸ್ತ್ರೋಕ್ತ ಕರ್ಮಗ ।
ಳಾದವುಗಳೋಂಕಾರ ಪೂರ್ವಕ ।
ವಾದ ಮಂತ್ರಾರಂಭದಿಂದದರಿಂದ ಲೋಕದಲಿ ॥
ಆದರದೊಳಾಂ ಪೇಳಿದಾ ಯ ।
ಜ್ಞಾದಿಗಳೊಳಿಹ ಕ್ರಿಯೆಯೆ ತತ್ತೆಂ ।
ದಾದುದದರೊಳು ಫಲವ ಬಯಸರು ಮೋಕ್ಷಕಾಂಕ್ಷಿಗಳು ॥ ೧೬ ॥

ಸತ್ತೆನುವರಸ್ಥಿತ್ವವನು, ಮೇ ।
ಣುತ್ತಮೋತ್ತಮ ಧರ್ಮವನು ಸಾ ।
ಧುತ್ವವನು ತಪ ದಾನ ಯಜ್ಞಂಗಳಲಿ ತಿರವಾಂತ ॥
ಚಿತ್ತದಂತಸ್ಥವನು ಯಜ್ಞನಿ- ।
ಮಿತ್ತ ಮಾಳ್ಪಿಲ್ಲವನು ನೆಲದೊಳ- ।
ಸತ್ತೆನುವುದಿನ್ನಾವುದೆನಲದನೊರೆವೆ ಕೇಳೆಂದ ॥ ೧೭ ॥

ತಾನೆಮಾಡುವ ಯಜ್ಞವಾಗಲಿ ।
ದಾನವಾಗಲಿ ತಪವಿರಲಿ ಮ ।
ತ್ತೇನನೆಸಗಲಿ ಶ್ರದ್ಧೆಯಿರದೊಡಸತ್ತದಾದಪುದು ॥
ಈ ನೆಲದ ಸುಖ ಕೀರ್ತಿ ಮೇಣ್ಸ್ವ ।
ರ್ಗಾನುಭವವದರಿಂ ದೊರಕದೆಂ ।
ದಾ ನರೋತ್ತಮ ಮಂಗಲಶ್ರೀನಾಥನುಸಿರಿದನು ॥ ೧೮ ॥



## ೧೮ನೆಯ ಸಂಧಿ

ರಕ್ಷಿತಾಖಿಳಲೋಕನಂಬುರು ।
ಹಾಕ್ಷನನುಪಮಶೌರ್ಯನೊರೆದನು ।
ಮೋಕ್ಷ ಸನ್ಯಾಸವನು ವಿಸ್ತರವಾಗಿ ಪಾರ್ಥಂಗೆ ॥

ಖಳಹರನೆ ಸನ್ಯಾಸವಾವುದು ।
ನಳಿನ ನಾಭನೆ ತ್ಯಾಗವಾವುದು ।
ಜಳರುಹಾಂಬಕ ಭೇದವೇನವಕೆಲೆ ಹೃಷೀಕೇಶ ॥
ತಿಳಿಯಬೇಕದನೆಂದು ಮನ್ಮನ ।
ದೊಳಗೆ ಪುಟ್ಟಿದ ಬಯಕೆಯನು ಮಂ ।
ಗಳ ಮಹಾಶ್ರೀರಮಣ ವಿಶ್ವವರೇಣ್ಯ ಕೈಗೊಳಿಸು ॥ ೧ ॥

ನುಡಿವೆನಂತಿರೆ ಕಾಮ್ಯಕರ್ಮದ ।
ಕಡೆಗೆ ಕಣ್ಣಿಡದವುಗಳನಿತನು ।
ಬಿಡುವುದೇ ಸನ್ಯಾಸವಿನ್ನೀ ಸಕಲ ಕರ್ಮವನು ॥
ನಡಸಿ ಮನದಲಿ ಫಲದ ಬಯಕೆಯ ।
ಹಿಡಿಯದಿಹುದೇ ತ್ಯಾಗವೆಂಬುದು ।
ಪೊಡವಿಯಲಿ ಬಲ್ಲವರ ಮತವಿದು ಪಾರ್ಥಕೇಳೆಂದ ॥ ೨ ॥

ಎಲ್ಲಿ ಕರ್ಮದ ಮಾತನುಸಿರುವ ।
ರಲ್ಲಿ ದೋಷವದಿಪ್ಪುದದರಿಂ ।
ದೆಲ್ಲವನು ಬಿಡಬೇಕೆನುವವರು ಕೆಲರು, ಕೆಲಕೆಲರು ॥
ಸಲ್ಲದಾ ನುಡಿ ಸಕಲ ಕರ್ಮವ ।
ನೆಲ್ಲಬಿಟ್ಟರು ಸರ್ವಥಾ ಮ ।
ತ್ತಿಲ್ಲಿ ಕ್ರತು ತಪ ದಾನಗಳ ಬಿಡಗೂಡದೆಂಬುವರು ॥ ೩ ॥

ಪಂಡಿತರ ಮತವೀ ತೆರದಿ ನೆಲೆ ।
ಗೊಂಡಿರುವುದಂತಲ್ಲದೊಂದಾಂ ।
ಕಂಡಮತ ಬೇರಿಪ್ಪುದದು ಪಾವನವು ಸರ್ವರಿಗೆ ॥
ಪಾಂಡವನೆ ಕೇಳಾವುದೆನೆ ಕೈ ।
ಗೊಂಡು ಕ್ರತು ತಪ ದಾನವಿವುಗಳ ।
ನಂಡಲೆಯದಾ ಕರ್ಮಫಲದಲಿ ತ್ಯಾಗಿಯಪ್ಪುದದು ॥ ೪ ॥

ನಡಸು ಕರ್ಮವನೆಂಬ ಶಾಸ್ತ್ರದ ।
ನುಡಿಗೆ ಮನ್ನಣೆಗೊಡದೆ ಮರವೆಯ ।
ಮಡುವಿನಿಂ ಮೇಲ್ಪೈದಿನಿಲದಾ ಕರ್ಮವೆಲ್ಲವನು ॥
ಬಿಡುವುದರಿನದು ತ್ಯಾಗವಪ್ಪುದೆ ।
ಪಡೆಯಲಪ್ಪುದೆ ನಿತ್ಯ ಸುಖವನು ।
ಮಡೆಯತನದಾ ತ್ಯಾಗವೆನಲದು ತಾಮಸತ್ಯಾಗ ॥ ೫ ॥

ಇದು ಕಠಿಣವಿದು ದುಃಖಕಾರಕ ।
ವಿದು ಶರೀರ ಶ್ರಮವೆನುತ ಹೆ ।
ಬ್ಬೆದರಿಕೆಯಿನಂತುಳಿದೊಡಹುದದು ರಾಜಸತ್ಯಾಗ ॥
ಇದು ಸಲುವುದಿದು ಮಾಡಿತೀರ್ಚುವು ।
ದಿದು ನಿಯತವಿದು ಮಾಳ್ಪುದಿಂತೆಂ ।
ದದನು ಬಿಡದಾ ಫಲವನುಳಿವುದೆ ಸಾತ್ವಿಕತ್ಯಾಗ ॥ ೬ ॥

ಬಿಟ್ಟರವು ಕರ್ಮಗಳು ಲೋಕದಿ ।
ಪುಟ್ಟದರನೆಂದರಿದು ಶಂಕೆಯ ।
ಬಿಟ್ಟು ಸತ್ವಸ್ಥತೆಯೊಳಿಷ್ಟಾನಿಷ್ಟಕರ್ಮದಲಿ ॥
ಬಿಟ್ಟು ಕೆಳೆಹಗೆತನಗಳನು ಮನ ।
ಮುಟ್ಟಿಫಲವನು ಬಯಸದಿರುವ ವಿ ।
ಶಿಷ್ಟನಾವವನಾತನೇ ಕೇಳ್ತ್ಯಾಗಿಯೆನಿಸುವನು ॥ ೭ ॥

ಆರಯಲ್ಕಿೀ ತ್ಯಾಗಿಗಳ ಕೈ ।
ಸೇರಲಿಹವಾ ಕರ್ಮಫಲವವು ।
ಮೂರುತೆರದಿಂದಿಷ್ಟ ಮಿಶ್ರಾನಿಷ್ಟವಾಗಿಹವು ॥
ಮೂರುವಿಧವಹ ಪೇಳ್ದ ಕರ್ಮದಿ ।
ಸೇರಿಫಲವನಪೇಕ್ಷಿಸದ ವಿ ।
ಸ್ತಾರಮತಿಗ್ಗಾ ತ್ಯಾಗಿಗಾ ಸನ್ಯಾಸಿಗವು ಸಲವು ॥ ೮ ॥

ನರನೆ ಕರ್ಮವಿದೊಗೆವುದಕೆ ಕೇ ।
ಳರುಹುವೆನಧಿಷ್ಠಾನ ಚೇಷ್ಟಾ ।
ಕರಣಕರ್ತೃವು ದೈವವಿವುಗಳೆ ಕಾರಣಗಳದಕೆ ॥
ಎರಕಗೊಳ್ಳದಡಿವುಗಳೊಪ್ಪುವ ।
ಪರಿ ಪರಿಯಕರ್ಮಗಳೊಳೊಂದಾ ।
ದರು ಮನೋವಾಕ್ಕಾಯಗಳಿನೆಂತಾದರುದಯಿಸದು ॥ ೯ ॥

ಅರಿಯದಿದನಜ್ಞಾನವಶದಿಂ ।
ದೊರೆವರಾವೇ ಕರ್ತರೆಂದವ ।
ರಿರಲಸಂಸ್ಕೃತ ಮತಿಗಳಾಗಿಹ ಮೂಢಮಾನವರು ॥
ಅರಿತಿದನು ನಿರ್ಲಿಪ್ತ ನಾನೆಂ ।
ದರಿದು ನಿರ್ಮಮನಾದವನು ಸ ।
ರ್ವರನು ಕೊಂದರು ಕೊಂದೊನಾಗನು ಬಂಧನಕೆ ಸಲನು ॥ ೧೦ ॥

ಮಾನವಾಧಿಪ ವಂಶವಿಲಸ ।
ದ್ಭಾನುಕೇಳ್ಳೈ ಜ್ಞೇಯವಿನ್ನಾ ।
ಜ್ಞಾನವಂತಾ ಜ್ಞಾತೃವೆಂಬೀ ಮೂರರಿಂದಾಗಿ ॥
ತಾನೆಯಪ್ಪುದು ಕರ್ಮಚೋದನೆ ।
ಮಾನನಿಧಿ ಕೇಳ್ಕರ್ಮಸಂಗ್ರಹ ।
ತಾನೆಯಪ್ಪುದು ಕರ್ತೃ ಕರಣವು ಕರ್ಮವಿವುಗಳಿನೆ ॥ ೧೧ ॥

ಮೂರು ಗುಣಗಳ ಹೆಚ್ಚುಗುಂದಿಂ ।
ಮೂರು ಮೂರು ತೆರಂಗಳಲಿ ವೈ ।
ದೋರಿ ತೋರುತ್ತಿಹವು ಜ್ಞಾನವು ಕರ್ಮ ಕರ್ತೃಗಳು ॥
ಚಾರುಗುಣಗಣವರ್ಧನನೆ ರಿಪು ।
ವಾರಮದಮರ್ದನನೆ ಕೇಳಾ ।
ಸಾರವರಿವಂತದನು ಪೇಳುವೆನಿನ್ನು ವಿಸ್ತರಿಸಿ ॥ ೧೨ ॥

ಬೇರೆ ಬೇರಾಗಿಪ್ಪುವೆಂದೇ ।
ತೋರುವೀ ಭೂತಂಗಳಲಿ ತಾಂ ।
ಬೇರೆಬೇರೆಂದಾಗದವ್ಯಯುವೆನಿಸುವೊಂದಾದ ॥
ಚಾರುತತ್ವವದಲ್ಲದಿಪ್ಪುದು ।
ಬೇರೆ ಮತ್ತೊಂದಿಲ್ಲವೆಂಬ ವಿ ।
ಚಾರದರಿವದು ಪಾರ್ಥ ತಿಳಿಯಾ ಸಾತ್ವಿಕ ಜ್ಞಾನ ॥ ೧೩ ॥

ಬೇರೆ ಬೇರಿಹುದರೊಳು ತತ್ವವು ।
ಬೇರೆಬೇರಾಗಿಪ್ಪುದಿನ್ನವು ।
ಬೇರೆ ಬೇರೆಂದರಿಯುವರಿವದು ರಾಜಸ ಜ್ಞಾನ ॥
ಬೇರೆ ಬೇರಿಹುದೊಂದೆಯಾಗಲಿ ।
ಬೇರೆಯಾಗಲಿ ಸಾರವರಿಯದೆ ।
ತೋರಿದಂದದೊಳರಿಯುವರಿವದು ತಾಮಸ ಜ್ಞಾನ ॥ ೧೪ ॥

ತಳೆಯದತ್ಯಾಸಕ್ತಿಯನು ಫಲ ।
ದೊಳಗೆ ರಾಗದ್ವೇಷವೆರಡನು ।
ಬಳಸದೆಲ್ಲವ ಮಾಡಲಹುದಾ ಕರ್ಮ ಸಾತ್ವಿಕವು ॥
ಬಳಸಿ ಕಾಮನೆಯಿಂದಹಂಕೃತಿ ।
ಯೊಳಗೆ ಸಂದಾಯಾಸವಟ್ಟು ।
ಮೃಳಿಸಿ ಮಾಡುವ ಕರ್ಮವೆನಲಾ ಕರ್ಮ ರಾಜಸವು ॥ ೧೫ ॥

ಹಿಂದೆ ಮುಂದನು ನೋಡದದರನು ।
ಬಂಧವನು ತಿಳಿಯದೆ ವಿಚಾರಿಸಿ ।
ದಂದದಿಂ ಕೈಗೂಡುವುದೊ ಕೈಗೂಡದಾದಪುದೊ ॥
ಎಂದು ತಿಳಿಯದೆ ಮೋಹವಶದಿಂ ।
ಬಂದುದೆಲ್ಲವು ಬರಲಿ ಮಾಡುವು ।
ದೆಂದು ತೊಡಗುವ ಕರ್ಮವೆನಲಾ ಕರ್ಮ ತಾಮಸವು ॥ ೧೬ ॥

ಸಿಧ್ಯಸಿದ್ಧಿಗಳಿಂ ವಿಕಾರವ ।
ಹೊದ್ದದಾನೆಂದೆನದ ಸಂಗನಿ ।
ಬದ್ಧನಾಗದ ಶಾಂತಿ ಧೃತ್ಯುತ್ಸಾಹಗಳ ಬಿಡದ ॥
ಇದ್ದುದರೊಳೊಡಬಡುವ ಕಂಡೆಡೆ ।
ಗೆದ್ದು ನಡೆದಿತರರನು ಕೆಣಕದ ।
ಬುದ್ಧಿವಂತನೆ ಪಾರ್ಥ ಸಾತ್ವಿಕ ಕರ್ತೃ ನೋಡೆಂದ ॥ ೧೭ ॥

ಶೋಕಹರ್ಷಂಗಳನು ತಳೆದವಿ ।
ವೇಕತನದಿಂ ಕರ್ಮ ಫಲವನ— ।
ನೇಕವಿಧದಿಂದಳಿದು ಚಿಂತಿಸಿ ಲೋಭವಶನಾಗಿ ॥
ಸಾಕೆನಿಸದಾಸೆಯಲಿ ಹಿಂಸೆಗೆ ।
ಹೇಕರಿಸದಂತಿರುವನಿತು ಕೋ
ಪಾಕುಳನದಾರವನು ರಾಜಸ ಕರ್ತೃ ನೋಡೆಂದ ॥ ೧೮ ॥

ಹಿತವನಹಿತವನರಿಯದವನು ।
ದ್ಧತನು ಮೂರ್ಖನು ಶುಂಠನತಿದುಃ ।
ಖಿತನು ಕಾರ್ಯದೊಳಲಸನೆನಲಾ ಕರ್ತೃ ತಾಮಸನು ॥
ಮತಿಯು ಮತ್ತಾ ಧೃತಿಯು ಗುಣಗಳ ।
ಜತೆಯಿನವು ಮೂದೆರಗಳಹ ಭಿ ।
ನ್ನತೆಯನೆಲ್ಲವನೊರೆವೆನದನವಧರಿಸು ನೀನೆಂದ ॥ ೧೯ ॥

ಆವುದಿನ್ನು ನಿವೃತ್ತಿ ಮತ್ತಿ ।
ನ್ನಾವ ತೆರವು ಪ್ರವೃತ್ತಿ ತಾನಿ ।
ನ್ನಾವವುಗಳು ಭಯಾಭಯಂಗಳ ಕಾರ್ಯಕಾರ್ಯಗಳು ॥
ಆವುವಿನ್ನಾ ಬಂಧ ಮೋಕ್ಷಗ ।
ಳಾವುವೆಂತೆಡೆಗೊಳುವುವೆಂದೆಂ ।
ಬೀ ವಿಚಾರವನರಿವ ಮತಿಯದು ಸಾತ್ವಿಕವು ಪಾರ್ಥ ॥ ೨೦ ॥

ಅರಿದು ಧರ್ಮಾಧರ್ಮವನು ನಿ ।
ರ್ಧರಿಸಿ ಕಾರ್ಯಾ ಕಾರ್ಯವೆಂತೆಂ ।
ದರಿಯಲರಿಯದ ಮತಿಯೆನಲ್ಕದು ರಾಜಸದ ಮತಿಯು ॥
ಪರಮ ಧರ್ಮವು ಕೀಳುತರ, ಕೀ ।
ಳ್ತರದ ಧರ್ಮವು ಪರಮವೆಂದೆಂ ।
ತೊರೆಯೆ ಬುಡಮೇಲಾಗಿ ಕಾಣಿಪ ಮತಿಯು ತಾಮಸವು ॥ ೨೧ ॥

ಸಾರಿ ಪ್ರಾಣೇಂದ್ರಿಯ ಮನೋವ್ಯಾ ।
ಪಾರವದು ನಿಜಯೋಗ ಪಥದಿಂ ।
ಬೇರೆದಾರಿಯೊಳಾಗದಂತಿಹ ಧೃತಿಯು ಸಾತ್ವಿಕವು ॥
ಸೇರಿ ಪುರುಷಾರ್ಥತ್ರಯದ ಫಲ ।
ಸಾರ ಮಾತ್ರಕೆ ಮಾಡಿಸಲ್ಕಾ ।
ಧಾರವಾಗಿಹ ಧೃತಿಯೆನಲ್ಕಾ ಧೃತಿಯು ರಾಜಸವು ॥ ೨೨ ॥

ನಿದ್ದೆ ಶೋಕ ವಿಷಾದ ಮದಗಳೊ ।
ಳದ್ದಿ ಮೇಲೆದ್ದಾಡದೊಲು ದು ।
ರ್ಬುದ್ಧಿಯನು ತಿರಗೊಳಿಸಲಿಪ್ಪಾ ಧೃತಿಯು ತಾಮಸವು ॥
ಇದ್ದು ಮೂದೆರದಿಂದ ಜೀವರ ।
ಮುದ್ದಿಸುವ ಸುಖವದರ ಭೇದವ ।
ಬುದ್ಧಿವಂತನೆ ಕೇಳು ಪೇಳುವೆನಿನ್ನು ವಿಸ್ತರಿಸಿ ॥ ೨೩ ॥

ಕಡೆವೊದಲು ಕಾಣಿಸದ ದುಃಖದ ।
ಕಡಲ ಕಡೆಹಾಯ್ದಾದಿಯಲಿ ವಿಷ, ।
ಕಡೆಗಮೃತವಪ್ಪಾತ್ಮನಿಷ್ಠಾಬಲದ ಬಲುಹಿನಲಿ ॥
ಪಡೆವ ಸುಖ ಸಾತ್ವಿಕವು ನಂಜನು ।
ಕಡೆಗೆ, ವೊದಲಮೃತವನು ತಾನೇ ।
ಕೊಡುವ ವಿಷಯೇಂದ್ರಿಯಗಳಿಂದಹೆ ಸುಖವು ರಾಜಸವು ॥ ೨೪ ॥

ಆದಿಯಿಂ ಕಡೆತನಕ ಮರವೆಯು ।
ಬೀದಿಯೊಳಗಾಲಸ್ಯ ಮದ ನಿ ।
ದ್ರಾದಿಗಳ ವ್ಯಾಪಾರದಿಂದಹೆ ಸುಖವು ತಾಮಸವು ॥
ಆದುದೆಲ್ಲವು ಮೂರು ಗುಣದಿಂ ।
ದಾದುದದರಿಂ ವಿಶ್ವದೊಳಗಿಂ ।
ತಾದುದಿದು ಮತ್ತೊಂದರಿಂದೇನಿಲ್ಲವೆಲೆ ಪಾರ್ಥ ॥ ೨೫ ॥

ಹುಟ್ಟುಗುಣದಿಂ ನಾಲ್ಕುವರ್ಣದಿ ।
ಹುಟ್ಟಿರುವ ಕರ್ಮವನು ನೀಂ ಕಿವಿ ।
ಗೊಟ್ಟು ಕೇಳಿಲೆ ಪಾರ್ಥ ಪೇಳುವೆನವುಗಳೊಳಗಿನ್ನು ॥
ಶಿಷ್ಟರೆನಿಸುವ ಬ್ರಹ್ಮವರ್ಣದ ।
ಹುಟ್ಟು ಕರ್ಮವೆನಲ್ಕೆ ಸರ್ವರ ।
ಹುಟ್ಟಿಸಿಹನವನೊರ್ವನಿಹನೆಂದೆಂಬ ತಿರದರಿವು ॥ ೨೬ ॥

ಶಮವು ಶಾಂತಿಯು ತಪವು ಶೌಚವು ।
ದಮವು ವಿಜ್ಞಾನಾರ್ಜವಂಗಳು ।
ಕ್ರಮದೊಳಾತ್ಮಜ್ಞಾನಸಹಿತಾಗಿಹವು ಭೂಪರೊಳು ॥
ಅಮಿತ ತೇಜೋ ಧೈರ್ಯದಕ್ಷತೆ ।
ವಿಮಲತರ ದಾತೃತ್ವ ಯುದ್ಧದಿ ।
ವಿಮುಖರೆನಿಸದ ಶೌರ್ಯವಿಂತಿವು ಸಹಜ ಕರ್ಮಗಳು ॥ ೨೭ ॥

ಊರುಜರ ವರ್ಣದಲಿ ಗುಣದನು ।
ಸಾರ ಪುಟ್ಟಿಹ ಕರ್ಮವೆನಲವು ।
ಮೂರಿಹವು ವಾಣಿಜ್ಯ ಕೃಷಿ ಗೋರಕ್ಷಣೆಗಳೆಂದು ॥
ಆರಯಲು ಶೂದ್ರರಲಿ ಸೇವೆಯ ।
ದಾರಿಯೆನಿಸುವದೊಂದೆ ಕರ್ಮವು ।
ಮೀರದಿಪ್ಪುದೆ ವಿಹಿತವವರವರ ವರ ಕರ್ಮವನು ॥ ೨೮ ॥

ಆವನಿದನೆಲ್ಲವನು ಸೃಜಿಸಿದ ।
ನಾವನಿದನೆಲ್ಲವನು ನಡಸುವ ।
ನಾವನಿದರಧಿನಾಥನೆಂಬುದನರಿದು ನಿತ್ಯದಲಿ ॥
ಆವನಾತನ ಕರ್ಮ ಮುಖದಿಂ ।
ಭಾವಶುದ್ಧಿಯೊಳರ್ಚಿಸುವನವ ।
ನೀ ವಿವಿಧ ಬಂಧನವನುಳಿದೈದುವನು ಸಿದ್ಧಿಯನು ॥ ೨೯ ॥

ಇಷ್ಟದಿಂದಾಚರಿಸಲಹುದು ।
ತೃಷ್ಟಪಥವೆಂದಿತರ ಧರ್ಮದಿ ।
ಕಟ್ಟುವಡೆವುದರಿಂದ ತಾನೇ ತನ್ನ ಧರ್ಮದಲಿ ॥
ಕಷ್ಟವಿದ್ದರು ಸಹನೆಯಿಂ ಕೈ ।
ಗೊಟ್ಟು ನಡೆವುದೆ ಶ್ರೇಯವದರಿಂ ।
ಬಿಟ್ಟಿರುವುದೆನಲುಚಿತವೆನಿಸದು ಕರ್ಮಧರ್ಮವನು ॥ ೩೦ ॥

ತಮ್ಮ ತಮ್ಮಯ ಸಹಜ ಕರ್ಮವ ।
ನೊಮ್ಮನದಿ ಮಾಡಿದೊಡೆ ದುರಿತದ ।
ಸೆಮ್ಮ ಸೋಂಕದು ನೋಡದಕ್ಷಯವೆಂಬುದನು ತಿಳಿದು ॥
ಸುಮ್ಮನಂತಾ ಕಂದುಕುಂದಿನ ।
ಬಿಮ್ಮನೆಣಿಸುವುದೇಕೆ ದೋಷದ ।
ಕೊಮ್ಮೆಕೊಳ್ಳದ ಕರ್ಮವಿಲ್ಲೆಲೆ ಪಾರ್ಥ ನೋಡೆಂದ ॥ ೩೧ ॥

ಎಲ್ಲಿಕಿಚ್ಚಿಹುದಲ್ಲಿ ಪೊಗೆಯಂ ।
ತೆಲ್ಲಿ ಕರ್ಮವದಲ್ಲಿ ದೋಷವ ।
ದಲ್ಲದಿಲ್ಲದರಿಂದ ಕೀಳ್ಮೇಲೆಂಬ ಶಂಕೆಯಲಿ ॥
ಗಲ್ಲದಲಿ ಕೈಯಿಟ್ಟು ಚಿಂತನೆ ।
ಯಲ್ಲಿ ತೊಳಲದೆ ನಿಯತ ಕರ್ಮವ ।
ನೆಲ್ಲವನು ಕೈಗೊಂಡು ಮಾಡುವುದುಚಿತ ನೋಡೆಂದ ॥ ೩೨ ॥

ಇಂತು ಕರ್ಮವನೆಲ್ಲವನು ನಿ ।
ಶ್ಚಿಂತೆಯಿಂ ಯುಕ್ತಾತ್ಮನಾಗಿ ನಿ ।
ರಂತರದಿ ತಾಂಗೈದನೆನೆ ನೈಷ್ಕರ್ಮ್ಯ ಸಿದ್ಧಿಯನು ॥
ಆಂತಪನು ನೈಷ್ಕರ್ಮ್ಯ ಸಿದ್ಧಿಯ ।
ನಾಂತನಾದೊಡೆ ಪರಮಪದವದ ।
ನೆಂತು ಪಡೆವೊಡೆ ಸಾಧ್ಯವಹುದದನೊರೆವೆ ಕೇಳೆಂದ ॥ ೩೩ ॥

ಶುದ್ಧ ಬುದ್ಧಿಯ ತಳೆದು ಧೈರ್ಯವ ।
ಹೊದ್ದಿ ರಾಗದ್ವೇಷವೆರಡರ ।
ಗೆದ್ದು ವಿಷಯಾದಿಗಳ ಗಣಿಸದೆ ನಿರ್ಜನ ಸ್ಥಳದಿ ॥
ಇದ್ದು ಸಂಯಮ ಚಿತ್ತನಾಗಿ ವಿ ।
ರುದ್ಧದಾಹಾರವನು ಸೇವಿಸ ।
ದೊದ್ದಹಂಕಾರವನು ವೈರಾಗ್ಯದಲಿ ಸಲೆಸಂದು ॥ ೩೪ ॥

ಮತ್ತೆ ಕಾಮಕ್ರೋಧಗಳ ಕೆಲ ।
ಕೊತ್ತಿ ದರ್ಪವನುಳಿದು ಶಾಂತತೆ ।
ವೆತ್ತು ಧ್ಯಾನಾಸಕ್ತನಾದೊಡೆ ಸರ್ವಕಾಲವಲಿ ॥
ಉತ್ತಮೋತ್ತಮ ಬ್ರಹ್ಮಭೂತನೆ ।
ನುತ್ತಲಹೆನಂತಾಗಿ ಸಮತಾ ।
ಚಿತ್ತವೆಡೆಗೊಳೆ ಪರಮಭಕ್ತಿಯ ಪಡೆವನವನೆಂದ ॥ ೩೫ ॥

ಪಡೆದನೆನೆ ಭಕ್ತಿಯನು ತಾನಾ ।
ರೊಡೆಯನಾರಾನಾರೆನಿಪುದನು ।
ದೃಢಮನದೊಳರಿದೆನ್ನ ಪೂರ್ಣಜ್ಞಾನವೆಡೆಗೊಂಡು ॥
ಪಡೆವನೆನ್ನಾಶ್ರಯವನವನೀ ।
ಪೊಡವಿಯೊಳಗೇಂಗೈಯಲೆಸಗಲಿ ।
ಪಡೆವನವ್ಯಯವೆನಿಪ ವಿಮಲಸ್ಥಾನವನು ಕಡೆಗೆ ॥ ೩೬ ॥

ಬುದ್ಧಿ ಯೋಗಾಶ್ರಯವನದರಿಂ ।
ಹೊದ್ದಿ ಚಿತ್ತವನೆನ್ನೊಳಿರಿಸಿ ವಿ ।
ಶುದ್ಧ ಮನದಿಂದೆನ್ನೊಳರ್ಪಿಸು ಮಾಡುವೆಲ್ಲವನು ॥
ಬಿದ್ದೆಡಗದಾ ಕರ್ಮಫಲವಹೆ ।
ಹೆದ್ದೊರೆಯನುತ್ತರಿಪೆ ಯೊಡಬಡ ।
ದಿದ್ದರಿದಕೆಲೆ ಪಾರ್ಥ ನೀನೇ ಕೆಡುವೆ ನೋಡೆಂದ ॥ ೩೭ ॥

ಕದನವೇ ಬೇಡೆಂದಹೆಂಬಾ ।
ವದಲಿ ನಾಕೈಯಿಕ್ಕೆನೆಂದೆನ ।
ಲದು ನಿರರ್ಥಕ ನಿನ್ನ ನಿಶ್ಚಯದಿರವು ನೆಲೆಗೊಳದು ॥
ಅದನು ನಿನ್ನಯ ಪುಟ್ಟನಲಿ ಪು ।
ಟ್ಟಿದ ಸಹಜ ಗುಣವಂತೆ ಮಾಡಿಸು ।
ವುದು ವೃಥಾ ಸಂದೇಹ ಬೇಡೆಲೆ ಪಾರ್ಥನಿನಗೆಂದ ॥ ೩೮ ॥

ಮಾಡೆನೆನೆ ಪರತಂತ್ರನಹನೀಂ ।
ಮಾಡಬೇಕಲ್ಲದೊಡೆ ನಿನ್ನಿಂ ।
ಮಾಡಿಸುವುವು ಸ್ವಭಾವಜನ್ಯವೆನಿಪ್ಪ ಕರ್ಮಗಳು ॥
ನೋಡದೆಂತೆನೆ ಸರ್ವರಂತ ।
ರ್ಗೂಢನಹ ಪರಮೇಶ್ವರನೆ ನಿಂ ।
ದಾಡಿಸುವನೀ ಸಕಲಜೀವರ ಕರ್ಮಯಂತ್ರದಲಿ ॥ ೩೯ ॥

ಆಗು ಹೋಗುಗಳಪ್ಪುವದರಿಂ।
ದಾಗಿ ನೀನಾತನನೆ ಮರೆಪೊಗು।
ನೀಗಿ ನಿನ್ನ ವಿಕಲ್ಪವೆಲ್ಲವ ಸಕಲ ಭಾವನೆಯಿಂ ॥
ಆಗುಣಜ್ಞನ ಭಾವಿಸೈ ತಾ।
ನಾಗಿ ಶಾಂತಿಯ ಹೊಂದಿ ಸುಸ್ಥಿರ।
ದಾಗರವನೀಂ ಪಡೆವೆ ಪರಮಾನುಗ್ರಹದೊಳವನ ॥ ೬೦ ॥

ಗೂಢತರ ಸುಜ್ಞಾನವಿದ ನಾ।
ನಾಡಿ ತೋರ್ದೆನು ನಿನಗಿದನು ನೀಂ।
ನೋಡಿ ನಿನ್ನೊಳಗರಿದು ಪೂರ್ವಾಪರವದೆಲ್ಲವನು ॥
ಮಾಡು ಮನಬಂದಂತೆ ಮತ್ತೆಂ।
ಥಾಡಿದನು ಸದ್ಭಕ್ತ ಹೃದಯಾ।
ರೂಢನಹ ಲಕ್ಷ್ಮೀ ಮನೋಹರನುಚಿತ ರೀತಿಯಲಿ ॥ ೬೧ ॥

ಇನ್ನೊರೆವೆನಿನ್ನೊಂದನೇನೆನ।
ಲೆನ್ನನೇ ಚಿತ್ತದಲಿ ನೆಲೆಗೈ।
ದೆನ್ನವಂದಿಸು ಯಜಿಸು ಪೂಜಿಸು ಪರಮ ಭಕ್ತಿಯಲಿ ॥
ಎನ್ನ ಕೀರ್ತಿಸು ಸೇವಿಸದರಿಂ।
ದೆನ್ನಹೊಂದುವೆ ಪಾರ್ಥ ಸತ್ಯವಿ।
ದಿನ್ನು ಗುಹ್ಯಾದ್ಗುಹ್ಯತರವೆನ್ನಾಣೆ ಕೇಳೆಂದ ॥ ೬೨ ॥

ಆನದೋರ್ವನೆ ಶರಣವೆಂದನು।
ಮಾನಗೊಳ್ಳದೆ ಮೋಕ್ಷಧರ್ಮವಿ।
ಧಾನದಲಿ ಬೇರೆಲ್ಲವನು ಬಿಟ್ಟಿನ್ನನಾಶ್ರಯಿಸು ॥
ಆನೆ ನಿನ್ನನು ಸಕಲ ಪಾಪದ।
ಬೇನೆಯಿಂ ಗುಣವಡಿಸಿ ಸಲಹುವೆ।
ನಾನೆ ನೋಡೆಲೆ ಫಲುಗುಣನೆ ಭವರೋಗ ವೈದ್ಯನಲಾ ॥ ೬೩ ॥

ಇದನು ಭಕ್ತಿ ತಪೋವಿಹೀನರಿ ।
ಗಿದನು ಕೇಳುವೊಡಿಷ್ಟಪಡದರಿ ।
ಗಿದನು ಪೇಳದಿರೆನ್ನನಿಂದಿಸಿ ನಲಿವ ನೀಚರಿಗೆ ॥
ಇದನು ಪೇಳಾ ಪರಮಭಕ್ತರಿ ।
ಗದರಿನೆನ್ನನೆ ಪಡೆವರವರಿ ।
ನ್ನಿದಕೆ ಸಂಶಯವಿಲ್ಲವೆನಗಂತವರೆ ಸುಪ್ರಿಯರು ॥ ೪೪ ॥

ನರನೆ ನಮ್ಮಿಯ ಧರ್ಮ್ಯವಹ ಪರಿ ।
ಪರಿಯ ಸಂವಾದವನಿದನು ಸು ।
ಸ್ಥಿರದೊಳರಿದಧ್ಯಯನವನು ಮಾಡಿದೊಡೆ ಮತ್ತೆನಗೆ ॥
ವಿರಚಿಸಿದ ಸುಜ್ಞಾನಯಜ್ಞದ ।
ಪರಮ ಪೂಜೆಯದಕ್ಕು ತತ್ವ ।
ಜ್ಞರಿಗೆ ದೊರಕುವ ಪುಣ್ಯಲೋಕಗಳಕ್ಕು ಕೇಳ್ದರಿಗೆ ॥ ೪೫ ॥

ಕೇಳಿದೆಯಲಾ ಪಾರ್ಥ ನಿನಗಾಂ ।
ಪೇಳಿದುದನೇಕಾಗ್ರ ಮತಿಯಿಂ ।
ತಾಳಿತಿಳಿದೈ ನಿನ್ನ ಮನದಜ್ಞಾನವೆಂದೆಂಬ ॥
ಕಾಳಗತ್ತಲೆ ಹರಿದು ತಿಳಿವಿನ ।
ಬಾಳರವಿಯುದಿಸಿದನೆ ಚಿತ್ತದ ।
ಕೋಳುಕೊಸರಿತೆ ಬೆಳಕೆದೆಯಬಾಂದಳದಿ ಪಸರಿಸಿತೆ ॥ ೪೬ ॥

ನಿನ್ನಪೂರ್ಣಾನುಗ್ರಹದಿ ಕೇ ।
ಳಿನ್ನಮನಸಿನ ಮರವೆಯುಡುಗಿ ಜ ।
ಗನ್ನಿವಾಸನೆ ಸ್ಮೃತಿವಡೆದೆನಾಂ ಸಂಶಯಗಳಡಗಿ ॥
ಇನ್ನು ನೀನೆಂದಂತೆ ನಡೆವೊಡೆ ।
ಸನ್ನಿಹಿತನಾಗಿಹೆನು ಬೆಸಸೇ ।
ನಿನ್ನನುಜ್ಞೆಯದೇನು ಪೇಳಚ್ಯುತನೆ ನೀನೆಂದ ॥ ೪೭ ॥

ಮಾಧವಾರ್ಜುನರೊಳು ನಡೆದ ಸಂ।
ವಾದವಾದೀ ಕರ್ಮ ಬೋಧವ।
ನಾದಿಯಿಂ ಕಡೆತನಕ ಕೇಳ್ದಿಲ್ಲವನು ಪೇಳ್ವರಿವು ॥
ಬಾದರಾಯಣ ಮುನಿಯ ದಯೆಯಿಂ।
ದಾದುದಲ್ಲದೆ ಮೂಢವರ್ಗದೊ।
ಳಾದವಂಗೆನಗಿದನು ಬಣ್ಣಿಸಲೆತ್ತಣದು ಬಲುಹು ॥ ೪೮ ॥

ಲಾಲಿಸಾದರು ನೃಪತಿ ಹರಿಯ ವಿ।
ಶಾಲಮಹಿಮೆಯ ನೆನದೊಡನೆ ಮೆ।
ಯ್ಮೇಲೆ ನವಿರೇರ್ದಪ್ಪುದಾ ಸಂವಾದವನು ನೆನೆಯೇ ॥
ಆಲಿಯಿಂದಾನಂದ ಬಾಷ್ಪದ।
ಕಾಲುಪರಿದಪುದದ್ಭುತದ ನಿಜ।
ಲೀಲೆಯೆನಿಪ್ಪಾ ವಿಶ್ವರೂಪದಿನಪ್ಪುದಾಶ್ಚರ್ಯ ॥ ೪೯ ॥

ಎಲ್ಲಿ ಯೋಗೇಶ್ವರನಿಹೆನು ಮೇ।
ಣೆಲ್ಲಿಬಿಲುವಿಡಿದಿಹೆನು ಫಲುಗುಣ।
ನಲ್ಲಿ ಭೂತಿಶ್ರೀಜಯಶ್ರೀ ಕೀರ್ತಿ ನೆಲಸುವುದು ॥
ಬಲ್ಲಹೆನೆ ಕೇಳೆಂದು ಸಂಜಯ।
ನಲ್ಲಿ ಧೃತರಾಷ್ಟ್ರಂಗೊರೆದನೆಂ।
ಬಲ್ಲಿಗಿದು ಪರಿಪೂರ್ಣವಾದುದು ಹರಿಯಕರುಣದಲಿ ॥ ೫೦ ॥

ಬರಿದೆ ಭಾವೋದ್ರೇಕವೆಂದರಿ।
ಮರುಳನಂದದಿ ನೀತಿನಿಯಮಂ।
ದೊರೆದು ರೀತಿಯನುಳಿದು ನಾಚದೆ ಬಾಯ್ಗೆ ಬಂದಂತೆ ॥
ಬರೆದುದಲ್ಲನ್ಯಪ್ರಬಂಧದ।
ಸರಸ ಶಬ್ದಾರ್ಥಂಗಳಿಂ ಸಿಂ।
ಗರಿಸಿ ಮೆರೆಸಿದುದಲ್ಲ ಗೀತಾ ಸೂತ್ರ ಸಾರವಿದು ॥ ೫೧ ॥

ಅಂದು ಭಗವಂತನೆ ಧನಂಜಯ ।
ಗೆಂದುದನೆ ಮತಿವಿಡಿದನಿತನಿಂ ।
ತೆಂದೆನಿದನಾಂ ಭಾಮಿನೀಷಟ್ಪದಿಯ ವರ್ಣಕದಿ ॥
ನಂದನಂದನ ಭಜಕಜನತಾ ।
ನಂದಕಾರಣ ಮಂಗಲ ಶ್ರೀ ।
ಮಂದಗಾಮಿನಿಯರಸ ನಿತ್ಯಾನಂದ ಸಲಹೆನ್ನ ॥ ೫೨ ॥

ನುಡಿದು ತಪ್ಪುವ ಮಾನ್ಯರೊಂದೆಡೆ ।
ಕುಡುವುದನು ಕಡದುಂಬ ನೆಂಟರ ।
ಗಡಣವೊಂದೆಡೆ ಕೂಡಿಕಾಡಿದೊಡೆನ್ನನೆಚ್ಚರಿಸಿ ॥
ನುಡಿಸಿದನು ಬಡೆಕಿಲದೊಳಾಂ ಮನೆ ।
ವಿಡಿದು ಯೋಚಿಸುವಂದು ಯೋಗಿಗ ।
ಳೊಡೆಯನಾ ಶ್ರೀ ಕೃಷ್ಣನೆನ್ನಿಂ ತಾರಣಾಬ್ದದಲಿ ॥ ೫೩ ॥

ಮತ್ತಿ ನಾನಾ ವರ್ಣಕೂಟವ ।
ನೊತ್ತಿ ಗಂಟಲನೌಕಿ ಬಗೆಗಂ ।
ಡತ್ತ ನಡೆಯಿಸಿ ಪಾಳ್ಗವಿತೆಗಳನೆಳವೆಯೊಳು ಮೆರೆಸಿ ॥
ಹೊತ್ತ ವಾಗ್ದ್ರೋಹಕ್ಕೆ ಪ್ರಾಯ ।
ಶ್ಚಿತ್ತವೆಂದಾನೆಸಗಿ ಶ್ರೀಪುರು ।
ಷೋತ್ತಮನ ದಿವ್ಯಾಂಘ್ರಿ ಪಂಕಜಕರ್ಪಿಸಿದೆನಿದನು ॥ ೫೪ ॥

ವಿಧುರವಿಗಳಿಪ್ಪನ್ನೆವರ ಮಿಂ ।
ತಿದುನಿಲ್ಲಲಿ ಧಾರಿಣಿಯೊಳೆಲ್ಲರು ।
ವಿಧಿವಿಹಿತ ಕರ್ಮವನು ಮಾಡಲಿ ನಿರ್ಮಮತ್ವದಲಿ ॥
ಸದಯರಹೆ ಸಜ್ಜನರು ಕಬ್ಬದ ।
ಹದನರಿದ ಪಂಡಿತರು ತಪ್ಪುಗ ।
ಳಿದರೊಳಿದ್ದರೆ ತಿದ್ದಿಮೆರಸಲಿ ಶುದ್ಧ ಬುದ್ಧಿಯಲಿ ॥ ೫೫ ॥

ಕಾಮ ಮುಖ್ಯಾರಾತಿ ವರ್ಗೋ |
ದ್ದಾಮ ದರ್ಪವಿದಳನ ಹವ್ಯಕ |
ನಾಮ ಭೂಸುರ ಮಂಡಲಾಧೀಶ್ವರ ಮಹಾಮಹಿಮ ||
ರಾಮಚಂದ್ರಪುರಸ್ಥ ಸೀತಾ |
ರಾಮ ಪದಪಂಕೇಜ ಮಧುಕರ |
ರಾಮಚಂದ್ರ ಯತೀಂದ್ರ ರಕ್ಷಿಸು ರಾಯಗುರುವರ್ಯ || ೫೬ ||

